# ನವಲಗುಂದ ತಾಲ್ಲೂಕಿನ ಶಾಸನಗಳು ಮತ್ತು ದೇವಾಲಯಗಳು

ಶಾಸನಶಾಸ್ತ್ರ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ಸಂಪ್ರಬಂಧ

ಸಂಶೋಧಕ
ಯಲ್ಲಣ್ಣ ಕೆ.

ಮಾರ್ಗದರ್ಶಕರು
ಕೆ. ಜಿ. ಭಟ್‌ಸೂರಿ
ಪ್ರವಾಚಕರು



ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭ - ೦೮



# ನವಲಗುಂದ ತಾಲ್ಲೂಕಿನ ಶಾಸನಗಳು ಮತ್ತು ದೇವಾಲಯಗಳು

ಶಾಸನಶಾಸ್ತ್ರ ವಿಭಾಗದಲ್ಲಿ ಎಂ.ಫಿಲ್. ಪದವಿಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಸಂಪ್ರಬಂಧ

ಸಂಶೋಧಕ
ಯಲ್ಲಣ್ಣ. ಕೆ

ಮಾರ್ಗದರ್ಶಕರು
ಡಾ.ಕೆ.ಜಿ. ಭಟ್‌ಸೂರಿ
ಪ್ರವಾಚಕರು



ಸಮಾಜ ವಿಜ್ಞಾನಗಳ ನಿಕಾಯ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

## ಮಾರ್ಗದರ್ಶಕರ ಪ್ರಮಾಣ ಪತ್ರ

"ನವಲಗುಂದ ತಾಲ್ಲೂಕಿನ ಶಾಸನಗಳು ಮತ್ತು ದೇವಾಲಯಗಳು" ಎಂಬ ನಿಂಬಂಧವನ್ನು ಕನ್ನಡ ವಿಶ್ವವಿದ್ಯಾಲದ ಎಂ.ಫಿಲ್ ಪದವಿಗಾಗಿ ಶ್ರೀ ಯಲ್ಲಣ್ಣ ಕೆ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ-ವಿದ್ಯಾರಣ್ಯ

ದಿನಾಂಕ 15-10-08

ಡಾ. ಕೆ.ಜಿ.ಭಟ್‌ಸೂರಿ
ಪ್ರವಾಚಕರು ಹಾಗೂ ಮಾರ್ಗದರ್ಶಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

## ಸಂಶೋಧಕರ ಪ್ರಮಾಣ ಪತ್ರ

"ನವಲಗುಂದ ತಾಲ್ಲೂಕಿನ ಶಾಸನಗಳು ಮತ್ತು ದೇವಾಲಯಗಳು"ಎಂಬ ನಿಬಂಧವನ್ನು ಪ್ರವಾಚಕರಾದ ಡಾ.ಕೆ.ಜಿ.ಭಟ್‌ಸೂರಿ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಂಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ: 15-10-08

ಸ್ಥಳ: ವಿದ್ಯಾರಣ್ಯ

(ಯಲ್ಲಣ್ಣ ಕೆ.)
ಸಂಶೋಧಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

## ಪರಿವಿಡಿ





# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

**೧. ಪೀಠಿಕೆ**

ನವಲಗುಂದವು ಧಾರವಾಡ ಜಿಲ್ಲೆಯಲ್ಲಿನ ಒಂದು ತಾಲ್ಲೂಕು ಕೇಂದ್ರ. ನವಲಗುಂದ ಹೆಸರಿನ ಪ್ರಪ್ರಥಮ ಉಲ್ಲೇಖವು ಸಂಗೂರಿನ ಶಾಸನದಲ್ಲಿ ಬಂದಿದೆ. ನವಲಗುಂದ ಪದವು ನವಿಲು+ಗುಂದ ಎಂಬ ಎರಡು ಸಂಯುಕ್ತ ಪದಗಳಿಂದ ಕೂಡಿದೆ. 'ಕುಂದ' ಎಂದರೆ ಗುಡ್ಡವೆಂದು ಅರ್ಥ. ಈ ತಾಲ್ಲೂಕು ಈಶಾನ್ಯದ ಕಡೆಗೆ ಸ್ವಲ್ಪಮಟ್ಟಿಗೆ ಇಳಿಜಾರಿಗಿರುವ ಆದರೆ ಸ್ಥೂಲವಾಗಿ ಮೈದಾನವೆನ್ನಬಹುದಾದ ಪ್ರದೇಶದಲ್ಲಿದೆ (ಸೂರ್ಯನಾಥ್ ಯು. ಕಾಮತ್ ೧೯೮೪, ಪು. ೫೩೦) ಈ ತಾಲ್ಲೂಕಿನ ದಕ್ಷಿಣದಲ್ಲಿ ಬಲ್ಲರವಾಡ ಗ್ರಾಮದ ಬಳಿ ಬೆಣ್ಣೇಹಳ್ಳ ಉತ್ತರ ದಿಕ್ಕಿಗೆ ಹರಿದು, ಅನಂತರ ಈಶಾನ್ಯ ದಿಕ್ಕಿಗೆ ತಿರುಗಿ ಮೂಗೂನೂರಿನ ಬಳಿಯಲ್ಲಿ ನರಗುಂದ ತಾಲ್ಲೂಕನ್ನು ಪ್ರವೇಶಿಸುತ್ತದೆ. ಇದು ಕಪ್ಪು ಎರೆ ನೆಲವಾಗಿದೆ. ಹಳ್ಳಗಳು ಹಾಗೂ ಮಾನವ ನಿರ್ಮಿತವಾದ ಬಾವಿಗಳು ಇಲ್ಲಿ ವ್ಯವಸಾಯಕ್ಕೆ ಅನುಕೂಲವಾಗಿವೆ. ಮಳೆಯ ಅಭಾವದಿಂದಾಗಿ ಆದರೆ ಈ ತಾಲ್ಲೂಕು ಬರಕ್ಕೆ ತುತ್ತಾಗುತ್ತಿತ್ತು. ಮಲಪ್ರಭೆಯ ಬಲದಂಡೆ ಇತ್ತೀಚೆಗೆ ಕಾಲುವೆಯಿಂದಾಗಿ ಇಲ್ಲಿನ ಪರಿಸ್ಥಿತಿ ಸುಧಾರಿಸತ್ತಿದೆ (ಕನ್ನಡ ವಿಶ್ವಕೋಶ ಸಂಪುಟ ೧೦, ೨೦೦೫, ಪು. ೨)

ಈ ತಾಲ್ಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡಿದ್ದ ಸಂದರ್ಭದಲ್ಲಿ ಕಂಡುಬಂದ ದೇವಾಲಯಗಳು, ಶಿಲ್ಪಗಳು, ಸ್ಮಾರಕಗಲ್ಲುಗಳು, ಶಾಸನಗಳು ಈ ಪ್ರದೇಶದ ಪ್ರಾಚೀನ ರಾಜಕೀಯ, ಆಡಳಿತ, ವಾಸ್ತುಶಿಲ್ಪ, ಸಾಹಿತ್ಯ, ಧರ್ಮ, ಸಂಗೀತ, ಆರ್ಥಿಕ, ಆಚಾರ ವಿಚಾರ, ಸಂಪ್ರದಾಯ ಮೊದಲಾದ ಕೆಲವು ಮಹತ್ವವಾದ ವಿಚಾರಗಳನ್ನು ತಿಳಿದುಕೊಳ್ಳಲು ಆಕರಗಳಾಗಿವೆ. ಅವುಗಳನ್ನು ವಿವಿಧ ಮಗ್ಗುಲುಗಳಿಂದ ಒಂದೆಡೆಗೆ ಕಲೆಹಾಕಿ ಅಧ್ಯಯನ ಮಾಡುವುದು ಪ್ರಸ್ತುತ ಸಂಶೋಧನ ಅಧ್ಯಯನದ ಉದ್ದೇಶ. ಈ ತಾಲೂಕಿನಲ್ಲಿ ಕೆಲವು ಪ್ರಮುಖವಾದ ಐತಿಹಾಸಿಕ ಸ್ಥಳಗಳಿವೆ. ಶಿರಕೋಳ, ಅಣ್ಣೀಗೇರಿ, ನಾವಳ್ಳಿ, ನಲವಡಿ, ಅಹೆಟ್ಟಿ, ಶೆಲವಡಿ ಗ್ರಾಮಗಳಲ್ಲಿ ಶಾಸನಗಳು ಕಂಡುಬಂದಿವೆ. ಇವುಗಳಲ್ಲಿ ಅಣ್ಣಿಗೇರಿ ಗ್ರಾಮವು ಪ್ರಸಿದ್ಧವಾಗಿದೆ. ಇಲ್ಲಿ ಸುಮಾರು ೨೮ ಶಾಸನಗಳು ಕಂಡುಬಂದಿವೆ. ಶಾಸನಗಳಲ್ಲಿ ಮಾತ್ರವಲ್ಲದೆ ಮೇವುಂಡಿ, ಅಸುಂಡಿ, ಬೆಂತೂರು ನಂದವಾಡಿಗೆ (ಹುನಗುಂದ ತಾಲ್ಲೂಕು) ಮೊದಲಾದ ಗ್ರಾಮಗಳಲ್ಲಿದ್ದ ೧೧-೧೨ ನೆಯ ಶತಮಾನದ ಶಾಸನಗಳಲ್ಲಿ ಅಣ್ಣಂಗೆಱೆ ' ಎಂಬ ಹೆಸರಿನಿಂದ ಈ ಊರು ಉಲ್ಲೇಖಿಸಲ್ಪಟ್ಟಿದೆ. ಅಣ್ಣಂಗೆರೆ ಎಂದರೆ ಅಣ್ಣಿಗನಕೆಱೆ ಎಂಬುದರ ಉಚ್ಚಾರ ರೂಪವಾಗಿದೆ. (ಅಮೃತ ಮಹಾದೇವ ಅಣ್ಣಿಗೇರಿ ೧೯೬೦ ಪು. ೭) ಅಣ್ಣಿಗ ಎಂಬುವನು ಕಟ್ಟಿಸಿದ ಕೆರೆಯಿಂದ

ಅಣ್ಣಿಂಗೆರೆ ಎಂಬ ಹೆಸರು ಬಂದಿದೆ. ಕಾಲಾನುಕ್ರಮದಲ್ಲಿ ಅಣ್ಣಿಗೆಜೆ, ಅಣ್ಣಿಗೆರೆ, ಅಣ್ಣಿಗೇರಿ ಎಂದಾಗಿದೆ.

ಶಾಸನದಲ್ಲಿ ಉಕ್ತವಾದ ಜೇಬುಳಗೇರಿ ಎಂಬುದು ಅಣ್ಣಿಗೇರಿಯ ಒಂದು ಭಾಗವಾಗಿರಬಹುದೆಂದೂ ಅದೇ ಈಗಿನ ಜಾಡಗೇರಿ ಇರಬಹುದೆಂಬ ಪ್ರತೀತಿಯೂ ಇದೆ. ಅಣ್ಣಿಗನು ಕಟ್ಟಿಸಿದ ಕೆರೆ ಇದೆ ಎಂದು ಗುರುತಿಸಿ ಹೇಳುವುದಕ್ಕೆ ಆಧಾರಗಳು ದೊರೆತಿಲ್ಲ. ಬಹುಶಃ ಅಂಬಿಗೆರೆ ಹೆಸರೇ ಸೂಚಿಸುವಂತೆ ಆ ಕೆರೆಯನ್ನು ಅಂಬೆ ಎಂಬುವಳು ಕಟ್ಟಿಸಿರಬೇಕು ಅಥವಾ ಪಾರ್ವತಿಯ ಗುಡಿಯ ಎದುರಿಗಿರುವುದರಿಂದ ಈ ಕೆರೆಗೆ ಆ ಹೆಸರು ಬಂದಿರುವ ಸಾಧ್ಯತೆ ಇದೆ. ಅಣ್ಣಿಂಗೆಜೆ ಎಂಬುದನ್ನು ಸಂಸ್ಕೃತದಲ್ಲಿ ನಾಮಾಂತರಿಸಿದರೆ, ಅನ್ಯತಟಾಕ (ಬೇರೆ ಕೆರೆ ಎಂದರ್ಥ) ಎಂದು ಬಂದಿರಬೇಕು. ಈ ವಿಷಯ ಕಲ್ಯಾಣದ ಚಾಲುಕ್ಯ ತ್ರಿಭುವನಮಲ್ಲ ೬ನೇ ವಿಕ್ರಮಾದಿತ್ಯನ ಕ್ರಿ.ಶ. ೧೦೭೯ ರ ಚಿಕ್ಕ ಹಂದಿಗೊಳ ಶಾಸನದಲ್ಲಿ ಕಂಡುಬರುತ್ತದೆ. ಕೆರೆಯ ಮೇಲಿಂದ ಊರಿಗೆ ಹೆಸರು ಕೊಡುವ ಪದ್ಧತಿಯೂ ಇದೆ. ಅಬ್ಬೆಯಗೆಜೆ (ಅಬ್ಬೀಗೇರಿ) ಹಿರಿಯ ಕೆಜೆಯೂರು, ಹಿರೇಕೆರೂರು, ಚಿಕ್ಕೇಯೂರು ಪೂಟ್ಟಳಿಕೆರೆ, ಪುಲಿಗೆಜೆ (ಲಕ್ಷ್ಮೇಶ್ವರ) ಹೇಗೆ ಅನೇಕ ಹೆಸರುಗಳು ಕೆರೆಯಿಂದ ಬಂದಿರುವ ಸಾಧ್ಯತೆ ಇದೆ. (ಅಮೃತ ಮಹಾದೇವ ಅಣ್ಣಿಗೇರಿ, ೧೯೬೦ ಪು. ೯)

ಮಹಾಭಾರತದೊಂದಿಗೆ ತಾಲ್ಲೂಕಿನ ಅನೇಕ ಸ್ಥಳಗಳು ಐತಿಹ್ಯವನ್ನು ಹಂಚಿಕೊಂಡಿವೆ. ಹಾಗೆಯೇ ಅಣ್ಣಿಗೇರಿಯೂ ಸಹ ಪಾಂಡವರು ತಮ್ಮ ವನವಾಸಕಾಲದ ಸಮಯದಲ್ಲಿ ಇಲ್ಲಿಗೆ ಬಂದಿದ್ದರೆಂದು ಪ್ರತೀತಿ ಇದೆ. ಪ್ರಾಚೀನ ಕಾಲದಿಂದಲೂ ಇದು ಸಾಂಸ್ಕೃತಿಕ, ರಾಜಕೀಯ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿತ್ತು. ಪ್ರಾಚೀನ ಕರ್ನಾಟಕದ ಒಂದು ಸಮೃದ್ಧ ಪ್ರಾಂತ್ಯವಾದ ಬೆಳವೂಲ ೩೦೦ ಮುಖ್ಯ ಪಟ್ಟಣವಾಗಿತ್ತು. ಕ್ರಿ.ಶ. ೧೬೯೦ರ ಅವಧಿಯಲ್ಲಿ ಸವಣೂರಿನ ನವಾಬನು ಔರಂಗಜೇಬನ ಸಾಮಂತನಾಗಿ ಈ ಭಾಗದಲ್ಲಿ ಆಳುತ್ತಿದ್ದನು. ಆಗ ನವಲಗುಂದದ ದೇಸಾಯಿ ಇಮ್ಮಡಿ ಜಾಯಗೌಡನ ಅಧೀನದಲ್ಲಿದ್ದ ಈ ಗ್ರಾಮವು ಕಂದಾಯ ವಿಭಾಗವಾಗಿತ್ತು. ಕ್ರಿ.ಶ. ೧೭೪೭ರಲ್ಲಿ ಇದು ಸವಣನೂರಿನ ನವಾಬರಿಂದ ಪೇಶ್ವೆಗಳಿಗೆ ಹಸ್ತಾಂತರವಾಯಿತು. ಕ್ರಿ.ಶ. ೧೭೪೮ರಲ್ಲಿ ಹೈದರನ ದಾಳಿಯಿಂದ ಸ್ಥಳೀಯ ದೇಸಾಯಿ ಲಿಂಗನಗೌಡನು ಕ್ರಿ.ಶ. ೧೭೭೯-೮೩ರಲ್ಲಿ ಇದರ ಅಧಿಪತ್ಯವನ್ನು ವಹಿಸಿಕೊಂಡನು (ಸೂರ್ಯನಾಥ ಯು. ಕಾಮತ್ ಪು. ೫೩೦)

ಅಣ್ಣಿಗೇರಿಯನ್ನು ಹಲವಾರು ಶಾಸನಗಳಲ್ಲಿ ರಾಜಧಾನಿ ಪಟ್ಟಣವೆಂದು ಕರೆಯಲಾಗಿದೆ. ಬಾದಾಮಿ ಚಲುಕ್ಯರ ವಂಶದ ಪುಲಿಕೇಶಿ ಹಾಗೂ ಇಮ್ಮಡಿ ಕೀರ್ತಿವರ್ಮನ ಶಾಸನಗಳು ಇಲ್ಲಿ ದೊರೆಯುತ್ತವೆ. ರಾಷ್ಟ್ರಕೂಟರ ಇಮ್ಮಡಿ ಕೃಷ್ಣನ ಶಾಸನವೂ ಇಲ್ಲಿ ದೊರಕಿದೆ. ೧೨ನೇ ಶತಮಾನದ ಉತ್ತರಾರ್ಧ ಹಾಗೂ ೧೩ನೇ ಶತಮಾನದ ಪೂರ್ವಾರ್ಧದಲ್ಲಿ ಕಲ್ಯಾಣದ ಚಾಲುಕ್ಯರು, ಕಲಚೂರಿ, ಸೇವುಣರು, ಹೊಯ್ಸಳರು ಮುಂತಾದ ಅರಸು ಮನೆತನಗಳ ಆಳ್ವಿಕೆಗೆ ಈ ಪ್ರದೇಶ ಒಳಗಾಗಿತ್ತು. ಈ ತಾಲ್ಲೂಕಿನ ಅಮರಗೋಳದಲ್ಲಿ ಕ್ರಿ.ಶ. ೧೧-೧೨ ನೇ ಶತಮಾನದ ಭಗ್ನಾವಶೇಷಗಳು ಕಂಡುಬಂದಿವೆ. ಅರೆಕುರಹಟ್ಟಿ, ಕುಮಾರಗೊಪ್ಪ, ಗುಡಿಸಾಗರ, ಶಿಶ್ವನಹಳ್ಳಿಗಳಲ್ಲಿ ಶಾಸನಗಳು ದೊರಕಿವೆ.

ಕರ್ನಾಟಕದ ಇತರೆ ಪ್ರದೇಶಗಳಂತೆ ನವಲಗುಂದ ತಾಲ್ಲೂಕು ಆದಿ ಇತಿಹಾಸದ ನೆಲೆಗಳನ್ನು ಒಳಗೊಂಡಿದೆ. ಕದಂಬರ ನಂತರ ಈ ಪ್ರದೇಶವು ಬಾದಾಮಿ ಚಲುಕ್ಯರ ಆಡಳಿತಕ್ಕೆ ಒಳಪಟ್ಟಿತ್ತು. ಪ್ರಮುಖ ಸ್ಥಳವಾದ ಅಣ್ಣಿಗೇರಿಯಲ್ಲಿ ಹತ್ತಕ್ಕಿಂತ ಹೆಚ್ಚಿನ ಸ್ಮಾರಕಗಳು ಕಂಡುಬರುತ್ತವೆ. ಬಾದಾಮಿ ಚಲುಕ್ಯರ, ರಾಷ್ಟ್ರಕೂಟರ ಕಲ್ಯಾಣದ ಚಾಲುಕ್ಯರ ಹಾಗೂ ಹೊಯ್ಸಳರ ಶೈಲಿಯ ಸ್ಮಾರಕಗಳನ್ನು ಇಲ್ಲಿ ಕಾಣಬಹುದು. ನವಲಗುಂದ

ತಾಲ್ಲೂಕಿನ ಅಮರಗೋಳ, ಅರಹಟ್ಟಿ, ಅರೆಕುರಹಟ್ಟಿ, ಅಳಗವಾಡಿ, ಗುಡಿಸಾಗರಗಳಲ್ಲಿ ಸ್ಮಾರಕಗಳನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಗಳನ್ನು ಆದರಿಸಿ ಪ್ರಾದೇಶಿಕ ಅನ್ವೇಷಣೆ ಮಾಡಿ ನವಲಗುಂದ ತಾಲ್ಲೂಕಿನ ಶಾಸನಗಳ ಮತ್ತು ದೇವಾಲಯವನ್ನು ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

**೨. ಪೂರ್ವಾಧ್ಯಯನಗಳು**

ಡಾ.ಎಂ.ಎಂ.ಕಲಬುರ್ಗಿ ಅವರು "ಧಾರವಾಡ ಜಿಲ್ಲೆಯ ಶಾಸನಗಳ ಸೂಚಿ"ಯಲ್ಲಿ ನವಲಗುಂದ ತಾಲ್ಲೂಕಿನ ಶಾಸನಗಳನ್ನು ಸ್ಥೂಲವಾಗಿ ಪರಿಚಯಿಸಲಾಗಿದೆ. S.I.I. xi (ii) ಸಂಪುಟದಲ್ಲಿ ಮೊರಬ, ಶಿಶ್ವಿನಹಳ್ಳಿ, ಅಮರಗೋಳ, ನೆಲವಾಡಿ, ಅಣ್ಣಿಗೇರಿ ಮುಂತಾದ ಗ್ರಾಮಗಳಲ್ಲಿ ಶಾಸನಗಳು ದೊರೆತ ಬಗ್ಗೆ ಉಲ್ಲೇಖಗಳಿವೆ. ಸಿ.ಮಹದೇವ ಅವರ "ಕರ್ನಾಟಕ ದೇವಾಲಯದ ಕೋಶ ಧಾರವಾಡ ಜಿಲ್ಲೆ" ಕೃತಿಯಲ್ಲಿ ನವಲಗುಂದ ತಾಲೂಕಿನ ಶಾಸನಗಳು ಮತ್ತು ದೇವಾಲಯಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಲಾಗಿದೆ. ರು.ಮ.ಷಡಕ್ಷರಯ್ಯ ಮತ್ತು ಬಿ.ಜಯಮ್ಮ ಅವರು "ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು" ಕೃತಿಯಲ್ಲಿ ಈ ತಾಲ್ಲೂಕಿನಲ್ಲಿರುವ ಅನೇಕ ದೇವಾಲಯಗಳನ್ನು ಮತ್ತು ಮೂರ್ತಿ ಶಿಲ್ಪಗಳನ್ನು ಪ್ರಥಮಬಾರಿಗೆ ಪರಿಚಯಿಸಿಕೊಟ್ಟಿದ್ದಾರೆ. ಅದರಲ್ಲಿ ಈ ತಾಲ್ಲೂಕಿಗೆ ಸಂಬಂಧಿಸಿದಂತೆ ಅಮರಗೋಳದ ಬನಶಂಕರಿ ದೇವಾಲಯ, ಅಣ್ಣಿಗೇರಿಯ ನಾಗಾರ್ಜುನ ವಿಗ್ರಹ, ಅಣ್ಣಿಗೇರಿಯ ಗೋಸಾಸ ಸ್ತಂಭ ಮಾಹಿತಿ ದೊರಕಿಸಿಕೊಟ್ಟಿದ್ದಾರೆ. (ರು.ಮ.ಷಡಕ್ಷರಯ್ಯ ಮತ್ತು ಬಿ. ಜಯಮ್ಮ, ೨೦೦೭, ಪುಟ ೧೨) ಹಂಜೆ ಅಪ್ಪಣ್ಣ ಎನ್. "ಅಣ್ಣಿಗೆರಿಯ ಎರಡು ಜೈನಶಿಲಾಫಲಕ ಶಾಸನಗಳು" ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಸಂ. ೮೩/೩ ಜುಲೈ ಸೆ. ೨೦೦೫, ಪುಟ. ೫೭-೬೦) ಲೇಖನವು ಅಣ್ಣಿಗೇರಿ ಗ್ರಾಮದಲ್ಲಿರುವ ಜೈನ ಅವಶೇಷಗಳ ಬಗ್ಗೆ ತಿಳಿಸುತ್ತದೆ. "ಭದ್ರಾಪುರದ ನಿಷಧಿಗಲ್ಲು ಮತ್ತು ನಿಷಧಿಶಾಸನ" ಗ್ರಾಮದ ಬಗ್ಗೆ ತಿಳಿಸುತ್ತದೆ.

ಎಫ್.ಟಿ. ಹಳ್ಳಿಕೇರಿಯವರ "ನಮ್ಮೂರು ನಾವಳ್ಳಿ" ಎಂಬ ಕೃತಿಯಲ್ಲಿ ನಾವಳ್ಳಿ ಗ್ರಾಮದ ಪ್ರಾಚೀನ ಇತಿಹಾಸ ತಿಳಿಯುತ್ತದೆ. ನಾವಳ್ಳಿ ಗ್ರಾಮವು ಅಂದಾಜು ೯೦೦ ವರ್ಷಗಳಷ್ಟು ಪ್ರಾಚೀನ ಇದು ಬೆಳ್ವೊಲ ೩೦೦ ರ ಉಪವಿಭಾಗಗಳಲ್ಲಿ ಒಂದಾಗಿದ್ದು, ನವಲಗುಂದ ೪೦ರಲ್ಲಿ ಪ್ರಮುಖ ಗ್ರಾಮವಾಗಿದ್ದು ಕೇಂದ್ರಿಯ ಸೈನ್ಯದ ದಂಡನಾಯಕ ಸಾಹಿತ್ಯಪಯ್ಯ ಮತ್ತು ಸೈನ್ಯದ ದಂಡನಾಯಕ ಕೇಶವಚಮೂಡರು ದಂಡನಾಯಕರಾಗಿದ್ದ ವಿಷಯ ನಿರೂಪಣೆಗೊಂಡಿದೆ. (ಎಫ್.ಟಿ.ಹಳ್ಳಿಕೇರಿ ೨೦೦೭, ಪುಟ-೧) ಜೆ.ಬಿ.ಮನ್ನಾಚಾರವರ 'ನಾಗಲಿಂಗಪ್ರಭೆ' ಸ್ಮರಣ ಅಭಿನಂದನ ಗ್ರಂಥದಲ್ಲಿ ಶ್ರೀ ಅಜಾತನಾಗಲಿಂಗ ಮಹಾಸ್ವಾಮಿಗಳ ಮಠದ ಐತಿಹ್ಯ ಪರಂಪರೆ ಕ್ರಿ.ಶ. ೧೮೧೨ ರಲ್ಲಿ ನವಲಗುಂದ ಗ್ರಾಮದಲ್ಲಿ ಇವರು ಅಜಾತ ನಾಗಲಿಂಗಸ್ವಾಮಿ ಮಠದ ಸಾಕ್ಷೀಪದಲ್ಲಿ ಅಂತರ್ಧಾನರಾಗಿದ್ದಾರೆ ಎಂಬ ಮಾಹಿತಿ ಉಲ್ಲೇಖಿಸುತ್ತದೆ. (ವಿರೂಪಾಕ್ಷ ಬಡಿಗೇರ ೨೦೦೧, ಪುಟ ೬೩) ಅಪ್ಪಣ್ಣ ಎನ್. ಹಂಜೆ ಅವರ ಕೃತಿಯಲ್ಲಿ ಸಂಪಾದಿಸಿರುವ "ಅಣ್ಣಿಗೇರಿಯ ಸುಮತಿನಾಥ ತೀರ್ಥಂಕರನ ಶಿಲ್ಪ ಮತ್ತು ಶಾಸನ" ಈ ಲೇಖನ ಜೈನ ಪರಂಪರೆಯಲ್ಲಿ ಪ್ರಾಚೀನ ಮತ್ತು ಮಧ್ಯಯುಗೀನ ಸಂದರ್ಭಗಳಲ್ಲಿ ಮುನಿಗಳು ತಮ್ಮನ್ನು ವಿವಿಧ ಸಂಘಗಣ, ಗಚ್ಛ, ಅನ್ವಯ ಮತ್ತು ಬಳಿಗಳಿಂದ ಗುರುತಿಸಿಕೊಳ್ಳುವುದು ರೂಢಿಯಲ್ಲಿತ್ತು ಎಂಬುದನ್ನು ತಿಳಿಸುತ್ತದೆ. ಶ್ರೀ ವೆಂಕಟರಂಗೊ ಕಟ್ಟಿ ಅವರು ಸಂಪಾದಿಸಿರುವ ಧಾರವಾಡ ಬೆಳಗಾವಿ, ವಿಜಾಪುರ, ಕಾನಡಾ ಜಿಲ್ಲೆಗಳ ಗ್ಯಾಜೆಟಿಯರ್ ಕೃತಿಯಲ್ಲಿ ನವಲಗುಂದ ಪ್ರದೇಶದ ಭೌಗೋಳಿಕ ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯ ವಿವರಗಳಿವೆ. ಜಯಮ್ಮ ಬಿ. ಧಾರವಾಡ ಜಿಲ್ಲೆಯ ಪುರಾತತ್ವ ೨೦೦೬ ಅಪ್ರಕಟಿತ ಪಿ.ಹೆಚ್.ಡಿ

ಮಹಾಪ್ರಬಂಧದಲ್ಲಿ, ನವಲಗುಂದ ತಾಲೂಕಿನ ಕೆಲವು ಮಹತ್ವದ ದೇವಾಲಯಗಳಾದ ಅಮೃತೇಶ ದೇವಾಲಯ ಶಿಲ್ಪಗಳ ಹಾಗೂ ಅಣ್ಣಿಗೇರಿಯ ಶಾಸನಗಳ ಮತ್ತು ಸ್ಮಾರಕ ಕಲ್ಲುಗಳನ್ನು ಪರಿಚಯಿಸಿದ್ದಾರೆ. ಅಮೃತ ಮಹಾದೇವ ಅಣ್ಣಿಗೇರಿ ಅವರು ಸಂಪಾದಿಸಿದ ಶ್ರೀ ಸ್ವಯಂಭು ಅಮೃತೇಶ್ವರ ಅಣ್ಣಿಗೇರಿಗೆ ಸಂಬಂಧಿಸಿದ ಕೃತಿಯಲ್ಲಿ, ೧೧-೧೨ನೆಯ ಶತಮಾನದ ಶಾಸನಗಳಲ್ಲಿ ಅಣ್ಣಿಂಗೆಜೆ ಎಂಬ ಹೆಸರಿನಿಂದ ಈ ಊರು ಉಲ್ಲೇಖಿಸಲ್ಪಟ್ಟಿದೆ ಎಂದಿದೆ. ಅಣ್ಣಿಂಗೆರೆ ಎಂದರೆ 'ಅಣ್ಣಿಗನ ಕೆಜೆ' ಎಂಬುದರ ಉಚ್ಚಾರ ರೂಪಕವಾಗಿದೆ. ಹೀಗೆ ನವಲಗುಂದ ತಾಲ್ಲೂಕಿಗೆ ಸಂಬಂಧಿಸಿದ ಲೇಖನಗಳು, ಮಾಹಿತಿಗಳಿದ್ದರೂ, ಪ್ರತ್ಯೇಕವಾಗಿ ಇಲ್ಲಿನ ದೇವಾಲಯಗಳ ಮತ್ತು ಶಾಸನಗಳಿಗೆ ಸಂಬಂಧಿಸಿದಂತೆ ಕಾರಣ ಅಧ್ಯಯನ ಪೂರ್ಣಪ್ರಮಾಣದಲ್ಲಿ ನಡೆದಿಲ್ಲ. ನವಲಗುಂದ ತಾಲ್ಲೂಕಿನ ದೇವಾಲಯಗಳು ಮತ್ತು ಶಾಸನಗಳ ದೇವಾಲಯಗಳ ಅಧ್ಯಯನಲ್ಲಿ ಇಲ್ಲಿ ಕೈಗೊಳ್ಳಲಾಗಿದೆ.

### ೩. ಅಧ್ಯಯನದ ವ್ಯಾಪ್ತಿ

ನವಲಗುಂದ ತಾಲ್ಲೂಕಿನಲ್ಲಿ ಕ್ಷೇತ್ರಾಧಾರಿತದಲ್ಲಿ ಕಂಡುಬಂದ ಪ್ರಾಚೀನ ದೇವಾಲಯಗಳು, ಶಿಲ್ಪ, ಸ್ಮಾರಕಗಲ್ಲು, ಶಾಸನಗಳು, ಮೊದಲಾದ ಅವಶೇಷಗಳನ್ನು ಸಂಗ್ರಹಿಸಿ ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಿಯೊಂದಿಗೆ ಸಮಕಾಲೀನ ಸಂಸ್ಕೃತಿಯ ವಿವಧ ಮುಖಗಳನ್ನು ಪುನಾರಚಿಸುವುದಾಗಿದೆ. ಕೆಲವು ಸಂದರ್ಭಗಳಲ್ಲಿ ವಿಷಯ ವಿಶ್ಲೇಷಣೆಯ ದೃಷ್ಟಿಯಿಂದ ಈ ತಾಲ್ಲೂಕಿಗೆ ಸಂಬಂಧಿಸಿದಂತೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಾಯವಾಗುವ ಇತರೆಡೆಯ ಶಾಸನಗಳನ್ನೂ ಮತ್ತು ಸಮಕಾಲೀನ ಕೃತಿಗಳನ್ನು ಪೂರಕವಾಗಿಟ್ಟುಕೊಂಡು ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ.

### ೪. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನ ಸಂದರ್ಭದಲ್ಲಿ ಮತ್ತು ವಿಷಯ ನಿರೂಪಣೆಯಲ್ಲಿ ಕೆಲವು ವಿಧಾನಗಳನ್ನು ಅನುಸರಿಸಲಾಗಿದೆ. ಪ್ರಾರಂಭದಲ್ಲಿ ನವಲಗುಂದ ತಾಲ್ಲೂಕಿನ ಇತಿಹಾಸ, ಶಾಸನಗಳು ಮತ್ತು ದೇವಾಲಯಗಳ ಕುರಿತು ಈಗಾಗಲೇ ಪ್ರಕಟವಾಗಿರುವ ಕೃತಿ, ಲೇಖನ ಮತ್ತು ಪ್ರಬಂಧಗಳನ್ನು ಪರಿಶೀಲಿಸಿ ಒಟ್ಟಿಗೆ ಅಕಾರಾದಿಯಲ್ಲಿ ಆಕರ ಕೃತಿಗಳ ಪಟ್ಟಿಯನ್ನು ತಯಾರಿಸಿಕೊಳ್ಳಲಾಯಿತು. ತರುವಾಯ ಈ ತಾಲ್ಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಶಾಸನಗಳು ದೇವಾಲಯಗಳು, ಮಸೀದೆ, ಶಿಲ್ಪ, ಸ್ಮಾರಕಗಲ್ಲುಗಳ ವಿವರ ಪೂರ್ಣವಾದ ದಾಖಲಾತಿಯೊಂದಿಗೆ, ಅವುಗಳ ರೇಖಾಚಿತ್ರ ಮತ್ತು ಛಾಯಾಚಿತ್ರಗಳನ್ನು ಸಂಗ್ರಹಿಸಿಕೊಳ್ಳಲಾಯಿತು. ಆ ಗ್ರಾಮಗಳಲ್ಲಿ ಕಂಡುಬಂದ ಅಪ್ರಕಟಿತ ಶಾಸನಗಳ ಪಡಿಯಚ್ಚು ಸಂಗ್ರಹಿಸಿಕೊಳ್ಳಲಾಗಿದೆ. ನಂತರ ಕಾಲಾನುಕ್ರಮದಲ್ಲಿ ಹೊಂದಿಸಿ, ಅವು ಒದಗಿಸುವ ಮಾಹಿತಿಯುನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಿ ಆಯಾ ವಿಷಯಗಳನ್ನು ಪ್ರತ್ಯೇಕವಾದ ಪಟ್ಟಿಕೆಗಳಲ್ಲಿ ದಾಖಲಿಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ಪ್ರತಿಯೊಂದು ಪ್ರಾಚೀನ ದೇವಾಲಯದ ವಾಸ್ತು ರಚನೆಯನ್ನು ಅಧ್ಯಯನ ಮಾಡಿ, ಅವುಗಳ ವಿನ್ಯಾಸ ಮತ್ತು ಮಾದರಿ (ಶೈಲಿ)ಗಳನ್ನು ಗುರುತಿಸಿ, ಅವುಗಳ ಗುಣಲಕ್ಷಣಗಳನ್ನು ತಿಳಿದು, ಅವುಗಳ ವಾಸ್ತುವಿವರಣೆಗಳನ್ನು ಚರ್ಚಿಸುವಾಗ ಮೊದಲು ವಾಸ್ತು ರಚನೆಯನ್ನು ಗರ್ಭಗೃಹದಿಂದ ಮುಖಮಂಟಪದವರೆಗಿನ ಒಳಭಾಗ ನಂತರ ವಾರ್ಧ್ವಮುಖ ವಾಸ್ತು ರಚನೆಯನ್ನು ಅಧಿಷ್ಠಾನದಿಂದ ಶಿಖರದವರೆಗಿನ ಹೊರಭಾಗ ಪರಿಶೀಲಿಸಿ, ಅವುಗಳಲ್ಲಿರುವ ವಿವಿಧ ಉಪಾಂಗಗಳ ವಾಸ್ತು ಲಕ್ಷಣಗಳನ್ನು

ಪರಿಶೀಲಿಸಲಾಗಿದೆ. ದೇವಾಲಯಗಳಲ್ಲಿ ಮತ್ತು ಅವುಗಳ ಪರಿಸರದಲ್ಲಿ ಕಂಡುಬಂದ ಶಿಲ್ಪಗಳನ್ನು ಮಾಧ್ಯಮ ಶೈಲಿ, ಕಾಲಮಾನ ಮತ್ತು ಪ್ರತಿಮಾ ಲಕ್ಷಣಗಳ ಹಿನ್ನೆಲೆಯಲ್ಲಿ ಗಮನಿಸಿ ವಿಶ್ಲೇಷಿಸಿದೆ.

ಸ್ಮಾರಕ ಶಾಸನಗಳ ಕುರಿತು ಚರ್ಚಿಸುವಾಗ ಅವುಗಳ ಮೇಲಿರುವ ಶಾಸನ ಹಾಗೂ ಉಬ್ಬುಶಿಲ್ಪಗಳನ್ನು ಗಣನೆಗೆ ತೆಗೆದುಕೊಂಡು ವಿಷಯ ನಿರೂಪಣೆಗನುಗುಣವಾಗಿ ಅವುಗಳನ್ನು ವಿವಿಧ ಬಗೆಯಲ್ಲಿ ವಿಂಗಡಿಸಿ ಪರಿಶೀಲಿಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಮತ್ತು ಸ್ಥಳೀಯ ಶಾಸನೋಕ್ತ ದೇವಾಲಯಗಳನ್ನು ಕುರಿತು ಚರ್ಚಿಸುವಾಗ ಅವುಗಳ ಮಾಧ್ಯಮ ಮತ್ತು ಸಮಕಾಲೀನವಾಗಿ ಅವುಗಳ ಸ್ಥಾನಮಾನ ಮಾಡಲಾದ ವಿವರಗಳನ್ನು ಗಣನೆಗೆ ತಂದುಕೊಳ್ಳಲಾಗಿದೆ. ಹೀಗೆ ಮೂಲ ಮತ್ತು ಪೂರಕ ಆಕರಗಳಾದ ಶಾಸನ, ದೇವಾಲಯ ಶಿಲ್ಪ, ಇತರೆ ಸ್ಮಾರಕಗಳು ಮೊದಲಾದ ವಿವರಗಳನ್ನೆಲ್ಲ ಪ್ರತ್ಯೇಕವಾದ ಪಟ್ಟಿಕೆಯಲ್ಲಿ ಸಂಗ್ರಹಿಸಿ ವಿಷಯಕ್ಕನುಗುಣವಾಗಿ ಹೊಂದಿಸಿಕೊಂಡು ಪ್ರಸ್ತುತ ಸಂಶೋಧನ ಪ್ರಬಂಧವನ್ನು ವ್ಯವಸ್ಥಿತವಾದ ರೀತಿಯಲ್ಲಿ ವಿನ್ಯಾಗೊಳಿಸಲಾಗಿದೆ. ವಿಷಯ ನಿರೂಪಣೆಯ ಸಂದರ್ಭದಲ್ಲಿ ಅವಶ್ಯಕವೆನಿಸಿದ ನಕ್ಷೆಗಳು ರೇಖಾಚಿತ್ರಗಳನ್ನು ಕೊಡಲಾಗಿದೆ.

# ಅಧ್ಯಾಯ ಎರಡು

# ರಾಜಕೀಯ ಹಿನ್ನೆಲೆ

## ೧. ಪೀಠಿಕೆ

ನವಿಲುಕುಂದ ಎಂದರೆ ನವಿಲುಗಳು ಕುಣಿಯುತ್ತಿದ್ದ ಎತ್ತರವಾದ ಸ್ಥಳ ಎಂದರ್ಥ ಕ್ರಿ.ಶ. ೧೨೨೮ರ ಶಾಸನವು ದಾನಭೂಮಿಯನ್ನು ನವಿಲ್ಲಿಂದ ಕೋಲಿನಲ್ಲಿ ಅಳೆದು ಕೊಟ್ಟ ಅಂಶವನ್ನು ತಿಳಿಸುತ್ತದೆ. ನವಿಲ್ಲಿಂದ ಪದವು ನವಿಲು+ಕುಂದ ಎಂಬ ಸಂಸಯುಕ್ತ ಪರವಾಗಿದ್ದು, ಕುಂದ ಎಂದರರೆ ಗುಡ್ಡ ಎಂದು ಅರ್ಥ (ಸೂರ್ಯನಾಥ ಯು ಕಾಮತ್ ೧೯೮೦, ಪುಟ ೮೦)

ಮಹಾಭಾರತ, ಪುರಾಣ ಮತ್ತು ಹಲವು ಶಾಸನಗಳಲ್ಲಿ ಕರ್ನಾಟಕವನ್ನು ಕುಂತಳವೆಂದು ಕರೆಯಲಾಗಿದೆ. ಕರ್ನಾಟಕದಲ್ಲಿನ ಧಾರವಾಡ ಜಿಲ್ಲೆಯ ನವಲುಗುಂದ ತಾಲೂಕು ಕೇಂದ್ರ ಸ್ಥಳ. ನವಲಗುಂದ ತಾಲ್ಲೂಕಿನ ಹಲವಾರು ಸ್ಥಳಗಳು ಐತಿಹಾಸಿಕ ಮಹತ್ವಪಡೆದಿದೆ. (ಚನ್ನಕ್ಕ ಪಾವಟೆ ೨೦೦೩, ಪುಟ ೨೧) ಅವುಗಳಲ್ಲಿ ಅಣ್ಣಿಗೇರಿ ಪ್ರಮುಖ ಸ್ಥಾನ ಪಡೆದಿದೆ.ನಾವಳ್ಳಿ, ಅಮರಗೋಳ, ಶಿಶುವನಹಳ್ಳಿ ಸುತ್ತಮುತ್ತಲಿನ ಪ್ರದೇಶಗಳು ಸಾಮ್ರಾಜ್ಯಗಳ ತಿರುಳುನಾಡಾಗಿ ರಾಜಕೀಯ ಧಾರ್ಮಿಕ ಶೈಕ್ಷಣಿಕ ಚಟುವಟಿಕೆಗಳ ನೆಲೆಯಾಗಿದೆ.

ಬಾದಮಿ ಚಲುಕ್ಯರ ಕಾಲದಲ್ಲಿ ಎಂದರೆ ಕ್ರಿ.ಶ. ೫೫೦ ರಿಂದ ೭೫೨ ರ ವರೆಗೆ ಅಣ್ಣಿಗೇರಿ ಬಾದಾಮಿ ಅರಸು ಮನೆತನದ ರಾಜ್ಯಾಡಳಿತಕ್ಕೆ ಒಳಪಟ್ಟಿತ್ತು. ೨ನೆಯ ಕೀರ್ತಿವರ್ಮನ ಶಾಸನವು ಅಣ್ಣಿಗೇರಿಯಲ್ಲಿ ದೊರೆತಿದೆ. ಬನಶಂಕರಿದೇವಾಲಯದ ಮುಂದೆ ನಿಂತಿರುವ ಈ ಶಾಸನ ಜೇಬುಳಗೇರಿಯ ಗಾಮುಂಡನಾದ ಕಲಿಯಮನು ಒಂದು ಜೈನ ದೇವಾಲಯವನ್ನು ಕಟ್ಟಿಸಿದನೆಂದೂ, ಅದರ ಮುಂದೆ ಕೊಂಡಶೂಲರ ಕುಪ್ಪಉರ್ಫ ಕೀತಿರ್ವರ್ಮನ ಗೋಸಾನಿ ಒಂದು ಮೂರ್ತಿಯನ್ನು ನಿಲ್ಲಿಸಿದನೆಂದೂ ಇಮ್ಮಡಿ ಕೀರ್ತಿವರ್ಮನ ಶಾಸನವು ಉಲ್ಲೇಖಿಸುತ್ತದೆ. ಶಾಸನವನ್ನು (S.I.I.I, xi, i,5. B.K. No p 17of 1928-29) ಬರೆದವನು ದಿಶಾಪಾಲ (ಅಮೃತ ಮಹಾದೇವ ಅಣ್ಣಿಗೇರಿ ೧೯೬೦, ಪುಟ ೧೧)

ಬಾದಾಮಿ ಚಲುಕ್ಯರ ತರುವಾಯ ಅಣ್ಣಿಗೇರಿ ಮಳಖೇಡದ ರಾಷ್ಟ್ರಕೂಟರ ರಾಜ್ಯಕ್ಕೆ ಸೇರಿತ್ತು. ರಾಷ್ಟ್ರಕೂಟರ ವೀರಗಲ್ಲು ಶಾಸನ ಅಣ್ಣಿಗೇರಿಯಲ್ಲಿ ದೊರೆತಿದೆ. (S.I.I.I, xi, 32. B.K. No 198 p 17of 1928-29) ಇದರ ಕಾಲ ಅಕಾಲವರ್ಷನ ಕಾಲ ಬಹುಶಃ ೧ನೇ ಕೃಷ್ಣನ ಕಾಲಕ್ಕಿಂತಲೂ ಮೊದಲೆಂದು ತೋರುತ್ತದೆ. ಶತ್ರುಗಳು ಅಪರಿಸಿಕೊಂಡು ಹೋಗುತ್ತಿದ್ದ ದಾನಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ನಡೆದ ಕಾಳಗದಲ್ಲಿ ಮಡಿದ ಒಬ್ಬ ವೀರನ

ಸ್ಮರಣಾರ್ಥಕವಾಗಿ ಈ ವೀರಗಲ್ಲನ್ನು ನೆಡಲಾಗಿದೆ. ಗಂಗವಂಶದ ರಾಜನೂ ಆದ ಭೂತುಗನ ಮಗನು ಈ ಊರಲ್ಲಿ ಒಂದು ಜೀನಾಲಯವನ್ನು ಕಟ್ಟಿಸಿದ್ದಾನೆ (ಅಮೃತ ಮಹಾದೇವ ಅಣ್ಣಿಗೇರಿ ೧೯೬೦ ಪುಟ ೧)

ರಾಷ್ಟ್ರಕೂಟ ಆಳ್ವಿಕೆ ಕೊನೆಗೊಂಡ ಬಳಿಕ ಕಲ್ಯಾಣದ ಚಾಲುಕ್ಯರ ಆಳ್ವಿಕೆ ಪ್ರಾರಂಭವಾಯಿತು. (ಸಿ.ಮಾಹಾದೇವ ೨೦೦೬, ಪುಟ ೧೭) ಇದರ ಕಾಲದ ಅವಶೇಷಗಳು ಅಣ್ಣಿಗೇರಿಯಲ್ಲಿ ವಿಶೇಷವಾಗಿ ದೊರೆಯುತ್ತವೆ. ಅವುಗಳಲ್ಲಿ ಶಾಸನಗಳೇ ಮುಖ್ಯ ಉಳಿದವೆಂದರೆ, ದೇವಾಲಯ ಮಾತ್ರ ಮೂರ್ತಿಶಿಲ್ಪಗಳು ಚಾಲುಕ್ಯ ಭುವನೈಕೆ ಮಲ್ಲನಾದ ೨ನೆಯ ಸೋಮೇಶ್ವರನ ಅಣ್ಣೀಗೇರಿ ಶಾಸನವು (S.I.I. xi-i, No. 115, B.K. No. 108 of 1928-29) ಅಣ್ಣಿಗೇರಿ ಬೆಳ್ವಲನಾಡಿನ ರಾಜಧಾನಿಯಾಗಿತ್ತೆಂಬುದನ್ನು ಹೇಳುತ್ತದೆ. (E.I. xx, p. 347) ಇದೇ ಮನೆತನದ ಇರಿವಬೇಡಂಗ ರಾಜನ ಕ್ರಿ.ಶ. ೧೦೦೨ ಸಮಾರಿಗೆ ಮಹಾಸಾಮಂತನಾಗಿದ್ದ ಶೋಭರಸನು ಬೆಳ್ವಲ ೩೦೦, ಪುರಿಗೆಜೆ ೩೦೦, ಕುಂದೂರು ಈಗಿನ ನರೇಂದ್ರ ೫೦೦, ಕುಕ್ಕನೂರು ೩೦, ಎಂಬ ಭಾಗಗಳನ್ನು ಆಳುತ್ತಿದ್ದನು. ಒಂದು ನಾಡಿನ ಮುಖ್ಯ ಸ್ಥಳವಾಗಿದ್ದ ಅಣ್ಣಿಗೇರಿಯಲ್ಲಿ ಚಕ್ರವರ್ತಿಗಳು ತಮ್ಮ ಸಾಮಂತರನ್ನು ಇಡುವುದು ಸ್ವಾಭಾವಿಕ, ಶೋಭರಸನಂತಹ ಹಿರಿಯ ಅಧಿಕಾರಿಗಳು ಅಣ್ಣಿಗೇರಿಯಲ್ಲಿ ಕೆಲಕಾಲವಿದ್ದು ರಾಜ್ಯಭಾರ ಮಾಡಿದ್ದಾರೆ. ಇಂತಹ ಅಧಿಕಾರಗಳಲ್ಲಿ ಚಾಲುಕ್ಯ ೨ನೆಯ ಜಯಸಿಂಹನ ಕಾಲದಲ್ಲಿ (೧೦೧೮-೧೦೪೨) ದಂಡನಾಯಕ ವಾವಣರಸ, ಅದೇ ರಾಜಮನೆತನದ ಭುವನೈಕಮಲ್ಲನ (೧೦೬೮-೧೦೭೬) ಆಳ್ವಿಕೆಯಲ್ಲಿ ಬೆಳ್ವಲ, ಪುಲಿಗೆಜಿ ಭಾಗಗಳನ್ನು ಬೀಳನು ವೃತ್ತಿಯಿಂದ ಆಳುತ್ತಿದ್ದ, ಮಹಾಮಂಡಲೇಶ್ವರ ಸೋವಿದೇವ ಮೊದಲಾದ ಕೆಲವು ಅಧಿಕಾಗಳ ಹೆಸರುಗಳನ್ನು ಹೇಳಬಹುದು. (ಅಮೃತ ಮಹಾದೇವ ಅಣ್ಣಿಗೇರಿ, ೧೯೬೦, ಪು.೧೨) ಕಲ್ಯಾಣ ಚಾಲುಕ್ಯ ೩ನೆಯ ತೈಲಪನು ಪಟ್ಟದಿಂದ ತಳ್ಳಿ ಕಳಚುರ್ಯ ಬಿಜ್ಜಳನು ಅವನ ರಾಜ್ಯವನ್ನು ಅಪಹರಿಸುವ ವೇಳೆಯಲ್ಲಿ ತೈಲಪನು ಅಣ್ಣಿಗೇರಿಗೆ ಬಂದು ಕೆಲದಿನ ತಂಗಿ ಅಲ್ಲಿಂದ ರಾಜ್ಯಭಾರ ಮಾಡುತ್ತಿದ್ದನು. ಹೀಗೆ ಅಣ್ಣಿಗೇರಿಯಿಂದ ರಾಜ್ಯವನ್ನಾಳಿದ್ದು ಪ್ರಾಯಶಃ ಕ್ರಿ.ಶ. ೧೧೫೭ ಮತ್ತು ೧೧೬೨ ರ ನುಡವಿನ ಕಾಲದಲ್ಲಿ ಇರಬೇಕು. ಅನಂತರ ಅವನು ಬನವಾಸಿಯ ಕಡೆಗೆ ಹೋದನು. ಕ್ರಿ.ಶ. ೧೧೮೪-೮೫ ರಲ್ಲಿ ಚಾಲುಕ್ಯ ೪ನೆಯ ಸೋಮೇಶ್ವರನು ಅಣ್ಣಿಗೇರಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇರುತ್ತಿದ್ದನು. ಕಳೆದುಹೋಗಿದ್ದ. ರಾಜ್ಯವನ್ನು ಆತನಿಗೆ ಸಂಪಾದಿಸಿಕೊಟ್ಟ ಬಮ್ಮನು ಅಣ್ಣಿಗೇರಿಯಲ್ಲಿದ್ದನು. ಮುಂದೆ ಈ ಬಮ್ಮನನ್ನು ಕ್ರಿ.ಶ. ೧೧೯೨ರ ಸುಮಾರಿಗೆ ಹೊಯ್ಸಳ ೨ನೆಯ ವೀರಬಲ್ಲಾಳನು ಸೋಲಿಸಿದನು. ಈ ವೀರಬಲ್ಲಾಳನು ಲಕ್ಕುಂಡಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದನು. ಆ ಸಮಯದಲ್ಲಿ ಅವನು ಅಣ್ಣಿಗೇರಿಗೆ ಬಂದಿರುವ ಸಾಧ್ಯತೆ ಇದೆ. ಕ್ರಿ.ಶ. ೧೨೦೨ ನೆಯ ಇಸವಿಯ ಅಣ್ಣಿಗೇರಿ ಶಾಸನದಿಂದ ಭಿಲ್ಲಮನು ೨ನೆಯ ವೀರಬಲ್ಲಾಳನೊಡನೆ ಮಡಿದ ಸೊರಟೂರು ಯುದ್ಧದಲ್ಲಿ ಕ್ರಿ.ಶ. ೧೧೯೧-೯೨ ರ ಸುಮಾರಿಗೆ ಮಡಿದಿರಬೇಕು. ಭಿಲ್ಲಮನ ತರುವಾಯ ಅವನ ಮಗನಾದ ಜೈತುಗಿ ಪಟ್ಟವೇರಿದನು.

ಕ್ರಿ.ಶ. ೧೮೦೦ ನೆಯ ಜುಲೈ ತಿಂಗಳಲ್ಲಿ ಕರ್ನಲ್ ವೆಲ್ಲಸ್ಲಿಯಿಂದ ಬೆನ್ನಟ್ಟಲ್ಪಟ್ಟ ದರೋಡೆಕೋರನಾದ ಧುಂಡಜಿವಾಘನು ಡಂಬಳದಿಂದ ಓಡಿಬಂದು ಅಣ್ಣಿಗೇರಿಯಲ್ಲಿ ತಂಗಿದನು. ಅದೇ ವೆಲ್ಲಸ್ಲಿ ಅದೇ ವರುಷ ಅಕ್ಟೋಬರ್ ತಿಂಗಳಲ್ಲಿ ಅಣ್ಣಿಗೇರಿ, ಧಾರವಾಡ ಮತ್ತು ಹುಬ್ಬಳ್ಳಿಯಲ್ಲಿ ಕೆಲವು ಡೇರೆಗಳನ್ನು ಮಾಡಿಸಿದನು.

ಏಕೆಂದರೆ ಈ ಮೂರು ಊರುಗಳು ಆ ಕಾಲದಲ್ಲಿ ಬಟ್ಟೆಗಾಗಿ ಪ್ರಸಿದ್ಧವಾಗಿದ್ದವು. ಬ್ರಿಟಿಷರ ರಾಜ್ಯವು ಕರ್ನಾಟಕದಲ್ಲಿ ಪ್ರಾರಂಭವಾಗುವ ವೇಳೆಯಲ್ಲಿ ಅಣ್ಣಿಗೇರಿ ಮತ್ತು ಅದರ ಕೆಳಗಿನ ಹಳ್ಳಿಗಳು ನಿಪ್ಪಾಣಿಕರನ ಜಹಾಗೀರಿಗೆ ಸೇರಿದ್ದವು.

ಹನ್ನೆರಡನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ನಾವಳ್ಳಿ ಗ್ರಾಮ ಈ ಭಾಗದ ಪ್ರಮುಖ ಶಿಕ್ಷಣ ಕೇಂದ್ರವಾಗಿದ್ದರ ಕುರಿತು ಶಾಸನವೊಂದು ತಿಳಿಸುತ್ತದೆ. ಶಾಸನದ (S.I.I. vol, No. xi-ii, No 171, p. 218, P.A.S of Mysore 1986) ಉಲ್ಲೇಖದಂತೆ ನಾವಳ್ಳಿಯ ಮೂಲ ಹೆಸರು ನಾಪ್ಪೊರ್ವೇಳೆ ಅಂದಿನಿಂದ ಇಂದಿನವರೆಗೆ ಸೌಲಭ್ಯಕಾಂಕ್ಷೆಯಿಂದ ಸರಳೀಕರಣಗೊಂಡು ನಾಪ್ಪೊರ್ವೇಳೆ ಎಂಬುದು ನಾವಳ್ಳಿ ಎಂದು ರೂಪಾಂತರಗೊಂಡಿದೆ. (ಎಫ್.ಟಿ.ಹಳ್ಳಿಕೇರಿ, ೨೦೦೭, ಪು. ೧)

ನಾರ್+ಪೊಳೆ=ನಾಪ್ಪೊರ್ವೇಳ>ನಾಪ್ಪೊಳೆ>ನಾವಳ್ಳಿ ಹೀಗೆ ಪ>ವ ರೂಪಾಂತರ ಹೊಂದುತ್ತಾ ಕೊನೆಯ ಅಕ್ಷರ 'ಎ' ಕಾರ 'ಇ' ಕಾರವಾಗಿ ನಾಪ್ಪೊರ್ವಳೆ>ನಾವೊಳೆ>ನಾವಳ್ಳಿ ಎಂದಾಗಿದೆ. ಪ್ರಾದೇಶಿಕ ದೃಷ್ಟಿಯಿಂದ ಈ ಗ್ರಾಮದ ಸಮೀಪದ ಒಂದು ಹಳ್ಳಿ (ಹೊಳೆ) ಇದ್ದು ಈ ಹಿಂದಿ ಕೃಷಿಕರು ಕಲ್ನಾರನ್ನು ಹಳ್ಳದಲ್ಲಿ ಹೂತು ನಾರನ್ನು ತಯಾರಿಸುತ್ತಿದ್ದರು. ಕಲ್ನಾರು (ದೇವಬಾಳೆ) ಸಹ ಈ ಪ್ರದೇಶದಲ್ಲಿ ವಿಫಲವಾಗಿ ಬೆಳೆಯುತ್ತಿದ್ದದು ಇದಕ್ಕೆ ಕಾರಣವಾಗಿರಬಹುದು. ಅಂದು ಒಂದು ವೃತ್ತಿಯಾಗಿದ್ದು ಜನರು ಇದರಿಂದ ತಮ್ಮ ಜೀವನವನ್ನು ನಡೆಸುತ್ತಿರಬೇಕೆಂದು ತೋರುತ್ತದೆ. ಹೀಗಾಗಿ ನಾರಿನ ಹೊಳೆಯಿಂದಾಗಿ ನಾವಳ್ಳಿ ಎಂಬ ಹೆಸರು ಬಂದಿರಬಹುದು.

ತಮ್ಮ ಅವತಾರದ ಅವಧಿಯಲ್ಲಿ ನಾಗಲಿಂಗ ಸ್ವಾಮಿಗಳು ಭಾರತದ ತುಂಬೆಲ್ಲ ಸಂಚರಿಸಿ ಪವಾಡಗಳ ಮೂಲಕ ಜನ-ಮನ ತಿದ್ದಲು ಪ್ರಯತ್ನಿಸಿದರು. ಪ್ರಸ್ತುತ ಅವಧಿಯಲ್ಲಿ ನಿರಸಂಗಿ ಸಂಸ್ಥಾನವನ್ನು ನಾಲ್ಕನೆಯ ಜಾಯಪ್ಪ ದೇಸಾಯಿ ಕ್ರಿ.ಶ. ೧೮೫೪-೧೮೭೯ ಆಳುತ್ತಿದ್ದನು. ನಂತರ ತ್ಯಾಗವೀರ ಲಿಂಗರಾಜ ದೇಸಾಯಿರು ಕ್ರಿ.ಶ. ೧೮೭೨ ರಿಂದ ೧೯೦೬ರ ವರೆಗೆ ಸಂಸ್ಥಾನವನ್ನಾಳಿದರು. ಸಿರಸಂಗಿಗೆ ಮೇಲಿಂದ ಮೇಲೆ ಆಗಮಿಸುತ್ತಿದ್ದ ಅಜಾತ ನಾಗಲಿಂಗ ಸ್ವಾಮಿಗಳು ೧೮೫೧ ರಿಂದ ೧೮೮೧ ವರೆಗೆ ಸಿರಸಂಗಿಯಲ್ಲಿ ವಿಶೇಷತಃ ದೇಸಗತಿಯ ವಾಡೆಯಲ್ಲಿ ಸಿರಸಂಗಿ ಸಂಸ್ಥಾನದ ವಿನಾಶದ ಮುನ್ಸೂಚನೆಯ ಲಿಂಗರಾಜರ ದಾನ ಕುರಿತು ಹಲವು ಪವಾಡಗಳನ್ನು ಮಾಡಿಸಿ ಖ್ಯಾತರಾಗಿದ್ದಾರೆ. ಮುಷ್ಟಿಗೇರಿ ಗ್ರಾಮದಲ್ಲಿ ಗ್ರಾಮದೇವಿಯ ಅರ್ಚಕನಾದ ಕಾಳಪ್ಪ ಬಡಿಗೇರ ಇವನ ಕೈಯಲ್ಲಿಯ "ಬೈಬಲ್" ಗ್ರಂಥ ಕಸಿದುಕೊಂಡು ಅದರಲ್ಲಿ ದೊಡ್ಡದಾದ ಕಬ್ಬಿಣದ ಮೊಳೆಬಡಿದು ಅದರ ಮೂಲಕವಾಗಿ ತಮ್ಮ ಪುನರಾವತಾರದ ಮುನ್ಸೂಚನೆಯನ್ನು ಹೇಳಿ ಎಚ್ಚರಿಸಿ ಹೋದರು. ಸಮಕಾಲೀನ ಅನೇಕ ಸಾದಸಂತರಲ್ಲಿಯೇ ಇವರು ಸರ್ವಶ್ರೇಷ್ಠ ಎಂದು ಪರಿಗಣಿಸಲಾಗಿದೆ.

ನವಲಗುಂದ ತಾಲ್ಲೂಕಿನ ಸಾಸ್ವಿಹಳ್ಳಿ (ಜೋಷಿ ೧೯೭೫ : ೫) ಮತ್ತು ಗುಡಿಸಾಗರಗಳಲ್ಲಿ ಆದಿ ಹಳೆಯ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಅವಶೇಷಗಳನು ಇವೆ. ಇವರ ಕಾಲದಲ್ಲಿ ಅಣ್ಣಿಗೇರಿಯಲ್ಲಿ ಬಸದಿಯೊಂದು ನಿರ್ಮಾಣಗೊಂಡಿತು. ನೆರೆಯ ಲಕ್ಷ್ಮೀಶ್ವರದಲ್ಲಿ ಬಾದಾಮಿ ಚಲುಕ್ಯರ ಸ್ಮಾರಕಗಳು ಉಳಿದುಬಂದಿವೆ. (ಸಿ.ಮಹಾದೇವ, ೨೦೦೬, ಪು. ೧೫) ನಂತರ ನವಲಗುಂದ ಪ್ರದೇಶಗಳು ಸವಣೂರಿನ ನಬಾವನಿಂದ ಪೇಶ್ವೆಯ ಆಳ್ವಿಕೆಗೆ ಒಳಪಟ್ಟಿತು. ಹೈದರನು ೧೭೭೮ ರಲ್ಲಿ ಕೃಷ್ಣ ನದಿಯ ದಕ್ಷಿಣ ಭಾಗವನ್ನು ತನ್ನ ವಶಮಾಡಿಕೊಂಡ

ಮೇಲೆ ಹೈದರ ಅಧಿಪತ್ಯವನ್ನು ಒಪ್ಪಿಕೊಂಡ ಸ್ಥಳೀಯ (ಲಿಂಗನಗೌಡ ದೇಸಾಯಿ ೧೭೮೯-೧೭) ನವಲಗುಂದ ಅಧಿಪತ್ಯವನ್ನು ವಹಿಸಿಕೊಡಲಾಗಯಿತು.

ಈ ಪ್ರದೇಶದ ಸಾಂಪತ್ತಿಕ ಬೆಳವಣಿಗೆಗೆ ಬಹಳ ಪ್ರೋತ್ಸಾಹಕೊಟ್ಟನು. ಸಿರಸಂಗಿ ಇಲ್ಲಿನ ಪ್ರಾಚೀನ ಸ್ಮಾರಕಗಳಲ್ಲಿ ಹೆಸರಿಸಬೇಕಾದುವೆಂದರೆ ನವಿಲೇಶ್ವರ, ಗೋವಿಂದರಾಜ, ಗಣಪತಿ, ವೆಂಕಟೇಶ ವೀರಭದ್ರ ನಗರೇಶ್ವರಗುಡಿ ಮಾರುತಿ ಮತ್ತು ಬಸವಣ್ಣನ ದೇವಾಲಯಗಳು ಆಧಿನಾಥನಿಗಾಗಿ ನಿರ್ಮಿತವಾದ ಬಸದಿ, ಇಲ್ಲಿರುವ ಗಣಪತಿ ದೇವಸ್ಥಾನವನ್ನು ಇಲ್ಲಿ ತಂಗಿದ್ದ ಪೇಶ್ವಯ ಪೂಜೆ ನಡೆಸಲು ಒಂದೇ ಒಂದುದಿನದಲ್ಲಿ ದೇಸಾಯಿ ನಿರ್ಮಿಸಿದನೆಂಬ ಪ್ರತೀತಿ ಇದೆ. ನವಲಗುಂದ ಸ್ಥಳೀಯ ಕುಶಲಕರ್ಮಿಗಳಿಂದ ತಯಾರಿಸಿದ ಆಕರ್ಷಕ ಬಣ್ಣ ಬಣ್ಣದ ಜಮಖಾನೆಗಳು ಗುಡಾಗಳು, ಮರದ ತೊಟ್ಟಿಲುಗಳು ಆಟದ ಬೊಂಬೆಗಳಿಗೆ ಇದು ಪ್ರಸಿದ್ಧಿಯಾಗಿದೆ. (ಸೂರ್ಯನಾಥ ಕಾಮತ್, ೧೯೯೫, ಪು. ೫೩)

**೨ ರಾಜಕೀಯ, ಸ್ಥಿತಿಗಳು**

ಪ್ರಾಚೀನ ಕರ್ನಾಟಕವನ್ನು ಮುನ್ನಡೆಸಿದ ಶಕ್ತಿಗಳಲ್ಲಿ ರಾಜಶಕ್ತಿ ಪ್ರಮುಖವಾದುದು 'ರಾಜಾಕಾಲಸ್ಯಕಾರಣಂ' ಎಂಬ ಸೂಕ್ತ ಅರ್ಥ ಪಡೆವ ರೀತಿಯಲ್ಲಿ ರಾಜ ಮನೆತನಗಳು ಸಮಾಜ ಜೀವನದಲ್ಲಿ ಬಹು ಮುಖ್ಯ ಪಾತ್ರವಹಿಸುತ್ತಿದ್ದವು. ರಾಜ್ಯದ ಉನ್ನತ ಅಧಿಕಾರಿಯಾದ ರಾಜನ ಕೈ ಕೆಳಗೆ ಸಾಮಂತರು, ಮಾಂಡಳಿಕರು ಸಣ್ಣಸಣ್ಣ ಪ್ರಾಂತಗಳನ್ನಾಗಿ ಆಳುತ್ತಿದ್ದರು ಇವರ ಕೈಕೆಳಗೆ ನಾಳ್ಗಾವುಂಡರು, ಇವರ ಕೈಕೆಳಗೆ ಗಾವುಂಡರು ಹೀಗೆ ರಾಜ್ಯಾಧಿಕಾರ ವ್ಯವಸ್ಥೆ ಚಕ್ರವರ್ತಿಯಿಂದ ಗಾವುಂಡನವರೆಗೆ ವ್ಯಾಪಿಸಿದ್ದಿತು. (ಎಂ.ಎಂ.ಕಲಬುರ್ಗಿ, ೧೯೭೬, ಪು. ೬) ಒಂದು ರಾಜಕೀಯ ಅಥವಾ ನಾಡಿನ ಇತಿಹಾಸವೆಂದರೆ ನಿಜವಾಗಿ ಜನತೆಯ ಇತಿಹಾಸ ಎಂದರ್ಥ. ರಾಜಕೀಯ ಇತಿಹಾಸ ಎಂಬುದು ಸಾಂಸ್ಕೃತಿಕ ಅಧ್ಯಯನದಲ್ಲಿ ಒಂದು ಭಾಗವಾಗಿದ್ದರೂ ಸಾಂಸ್ಕೃತಿಕ ಅಧ್ಯಯನದಲ್ಲಿ ಬಹಳ ಮಹತ್ವದ್ದಾಗಿದೆ.

ನವಲಗುಂದ ತಾಲ್ಲೂಕಿನಲ್ಲಿ ಮೌರ್ಯ, ಶಾತವಾಹನ, ಬನವಾಸಿ, ಕದಂಬ, ಬಾದಾಮಿ ಚಲುಕ್ಯರ ಶಾಸನಗಳು ಈವರೆಗೆ ಲಭಿಸಿರುವ ರಾಷ್ಟ್ರಕೂಟ ಕಲ್ಯಾಣದ ಚಾಲುಕ್ಯ, ಹೊಯ್ಸಳ, ಚಕ್ರವರ್ತಿಗಳ ಮತ್ತು ಮಂಡಳಿಕರ ಆಳ್ವಿಕೆ ನಡೆಸಿದ ಕುರಿತು ಶಾಸನಗಳು ಮಾಹಿತಿ ನೀಡುತ್ತವೆ.

**೨.೧. ರಾಷ್ಟ್ರಕೂಟರು :** ಈ ತಾಲ್ಲೂಕಿನಲ್ಲಿ ಪ್ರಾಚೀನತಮ ಶಾಸನಗಳು ರಾಷ್ಟ್ರಕೂಟರ ಆಳ್ವಿಕೆಗೆ ಸಂಬಂಧಿಸಿವೆ. ಶವನಹಳ್ಳದಲ್ಲಿ ರಾಷ್ಟ್ರಕೂಟರ ಒಂದನೇ ಅಮೋಘವರ್ಷನ ಕ್ರಿ. ಶ. ೮೭೨ ಶಾಸನವಿದ್ದು, ಬೆಳ್ವಲ ಮೂನ್ನೂರರ ಅಧಿಕಾರಿ ದೇವಣ್ಣಯ್ಯನು ಸಿಸುಳಹಾಳದ ಬ್ರಾಹ್ಮಣರಿಗೆ ತುಪ್ಪದ ಮೇಲಿನ ಸುಂಕವಿನಾಯಿತಿ ಮಾಡಿದ ಉಲ್ಲೇಖವಿದೆ. ಕ್ರಿ.ಶ. ೧೨ನೆಯ ಶತಮಾನ ವೀರಗಲ್ಲೊಂದು ಗೋಗ್ರಹಣ ಮತ್ತು ಸಿಸುಹಳ್ಳಿಯನ್ನು ಪ್ರಸ್ತಾಪಿಸಿದೆ. ಉಳಿದೆರಡು ಶಾಸನಗಳು ೧೩ ಮತ್ತು ೧೫ ನೆಯ ಶತಮಾನಕ್ಕೆ ಸೇರಿದ್ದು ದಾನಗಳನ್ನು ದಾಖಲಿಸುತ್ತವೆ. (ಸಿ.ಮಹಾದೇವ, ೨೦೦೬, ಪು. ೧೫೧ ೨.೨)

**೨.೨. ಕಲ್ಯಾಣದ ಚಾಲುಕ್ಯರು :** ರಾಷ್ಟ್ರಕೂಟರ ತರುವಾಯ ಕರ್ನಾಟಕವನ್ನಾಳಿದವರು ಕಲ್ಯಾಣ ಚಾಲುಕ್ಯರು. ಉತ್ತರ ಕರ್ನಾಟಕದಲ್ಲಿ ಈ ಚಕ್ರವರ್ತಿಗಳ ಇವರ ಸಾಮಾಂತರ ಶಾಸನಗಳು ಹೇರಳ ಸಂಖ್ಯೆಯಲ್ಲಿ ಸಿಗುತ್ತವೆ.

ಪ್ರಸ್ತುತ ನವಲಗುಂದ ತಾಲ್ಲೂಕು ಇದಕ್ಕೆ ಅಪವಾದವಲ್ಲ. ಈ ತಾಲೂಕಿಗೆ ಸಂಬಂಧಿಸಿದ ಈ ಮನೆತನದ ೨ನೇ ಸೋಮೇಶ್ವರನ ಕಾಲದಲ್ಲಿ ಅಣ್ಣಿಗೇರಿಯ ಜೈನ ಬಸದಿ ಹತ್ತಿರ ಅಣ್ಣಿಗೇರಿಗೆ ಬಸದಿಗೆ ನೀಡಿದ ದಾನದ ಉಲ್ಲೇಖವಿದೆ. (E.I.xv, jpf. 347, B.K. No. 212 of 1928-29)

ಬನಶಂಕರಿ ದೇವಾಲಯದ ಮುಂಭಾಗದಲ್ಲಿ ಇಟ್ಟ ಕಲ್ಲಿನ ಮೇಲೆ ಈ ಶಾಸನ (S.I.I. B.K. No 197, of 1928-29) ಇಮ್ಮಡಿ ಕೀರ್ತಿವರ್ಮನ ಕಾಲಕ್ಕೆ ಸೇರಿದೆ ಇದು ಆತನ ೬ನೇ ವರ್ಷದ ಆಳ್ವಿಕೆಯದು. ಈ ಶಾಸನ ಜೇಬುಳಗೇರಿ ಗಾಮುಂಡ ಕಲಿಯಮ್ಮ ಚೇದಿಯು ಜೈನ ದೇವಾಲಯವನ್ನು ಮಾಡಿಸಿದ್ದನ್ನು ದಾಖಲಿಸುತ್ತದೆ. ಕೊಂಡಕುಲದ ಕುಪ್ಪಕೀರ್ತಿವರ್ಮನ ಈ ದೇವಾಲಯದ ಮುಂದೆ ಮೂರ್ತಿಯನ್ನು ಕೆತ್ತಿಸಿದನು. (ಸಿ.ಮಹಾದೇವ, ೨೦೦೬, ಪು. ೧೨೩)

ಕುರಹಟ್ಟಿ ಶಾಸನ ೧೨ ಶತಮಾನ ಚಾಲುಕ್ಯ ದೊರೆಯ ಕಾಲದ್ದಾಗಿದೆ. ಶಂಕರ ದೇವರಿಗೆ ದೀಪ ಉಳಿಸುವದಕ್ಕಾಗಿ ಎಣ್ಣೆಗಾಣ ಮತ್ತು ಹಲವಾರು ದಾನಗಳನ್ನು ಮಾಡಿದ್ದನ್ನು ದಾಖಲಿಸಿದೆ. ಈ ದಾನವನ್ನು ಆಗ್ರಹಾರದ ಮಹಾಜನಗಳು ಮತ್ತು ಉಳಿದವರು ಮಾಡಿದರೆಂದಿದೆ.

೬ನೇ ವಿಕ್ರಮಾದಿತ್ಯ ತರುವಾಯ ಕಾಲ ಶಕ ಪ್ಲವಂಗ ೧೦ ಇದು ಕ್ರಿ.ಶ. ೧೮೪೭-೪೮ ಕ್ಕೆ ಸಮವಾಗುತ್ತದೆ. ರಾಮರಾಯ ವೆಂಕಟಾದ್ರಿತೆರಿಗೆ ವಿನಾಯಿತಿ ನೀಡದ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕೊಂಡೋಜ ಮತ್ತು ಸಿದ್ದೋಜ ಜಾತಿಯವರಿಗೂ ಕೆಲವು ವಿನಾಯಿತ್ತಿ ನೀಡಿದ ವಿಷಯವಿದೆ.

ಅಣ್ಣಿಗೇರಿ ಇದೇ ಊರ ಪುರದೀರಪ್ಪನ ಗುಡಿಯ ಮುಂದೆ ಚಾಲುಕ್ಯರ ಸೋಮೇಶ್ವರ ಕಾಲದ ಕ್ರಿ.ಶ. ೧೧೮೪ ಶಾಸನ ಕಳಚೂರ್ಯ ಕಾಲಕ್ಕೆ ಅಗ್ನಿಯಿಂತಿದ್ದ ವೀರ ಬಮ್ಮರಸ ದಣ್ಣಾಯಕನು ಗದುಗಿನ ತ್ರಿಕೂಟೇಶ್ವರ ದೇವರಿಗೆ ದತ್ತಿಯನ್ನು ಬಿಡುವ ಕಾಲದಲ್ಲಿ ಅಣ್ಣಿಗೇಱಿಯ ವೀರ ಬಮ್ಮೇಶ್ವರ ದೇವಸ್ಥಾನದ ಜೀರ್ಣೋದ್ದಾರಕ್ಕೆ ಅಲ್ಲಿ ನಡೆಯುವ ಪೂಜೆಗೆ ಮತ್ತು ಮಾಹೇಶ್ವರರ ಊಟಕ್ಕೆ ಭೂಮಿಯನ್ನು ದಾನಮಾಡಿದ್ದಾನೆಂದು ಉಲ್ಲೇಖಿಸುತ್ತದೆ. ಈ ದಾನದ ಮೇಲ್ವಿಚಾರಣೆಯನ್ನು ಜೈನರಿಗೆ ಕಾಲರೂಪನಾದ ವೀರಗೊಗ್ಗಿ ದೇವರಸನು ನೋಡಿಕೊಳ್ಳುವನೆಂದು ಹೇಳಿದೆ (ಅಮೃತ ಮಹಾದೇವ ಅಣ್ಣಿಗೇರಿ, ೧೯೬೦, ಪು. ೨೧) ಈ ಮೇಲೆ ಉಲ್ಲೇಖಿಸಿದ ಶಾಸನಗಳಿಂದ ಅಣ್ಣಿಗೇರಿಯಲ್ಲಿ ಐದು ಬ್ರಹ್ಮಪುರಿಗಳು, ನರಕೇಶ್ವರ, ಚಂಡಿಕಾದೇವಿ ನಾಗೇಶ್ವರ ದೇವಾಲಯ, ವೀರ ಬಮ್ಮೇಶ್ವರನ ಗುಡಿ ಮೊದಲಾದವುಗಳ ಇದ್ದವೆಂದು ಗೊತ್ತಾಗುತ್ತದೆ.

ಮೈಲಾರ ದೇವರ ಗುಡಿಯ ಮುಂದಿರುವ ಚಾಲುಕ್ಯ ತ್ರಿಭುವನಮಲ್ಲ ೬ನೆಯ ವಿಕ್ರಮಾಧಿತ್ಯನ ಶಾಸನ, ಆತ್ರೆಯ ಗೋತ್ರದ ಮಹಾಮತ್ಯ ರಾಜಾಧ್ಯಕ್ಷ ಬಲದೇವಯ್ಯ ನಾಯಕನು ಕೆಲವು ಹಣವನ್ನು ಶ್ರಾವಣ ಮಾಸದ

ಪೌರ್ಣಿಮೆಯ ದಿನ ಬ್ರಾಹ್ಮಣರ ದಕ್ಷಿಣೇಗೆ ವಿನಿಯೋಗಿಸುವುದಕ್ಕಾಗಿ ಕೊಟ್ಟಿದ್ದಾನೆಂದು ಉಲ್ಲೇಖಿಸಿದೆ. ಈ ಶಾಸನದ ಕಾಲ ಕ್ರಿ.ಶ. ೧೦೯೭ ಅಣ್ಣಿಗೇರಿಯ ಮತ್ತೊಂದು ಐತಿಹಾಸಿಕ ಸಂಗತಿಯಿಂದಲೂ ಗಮನಿಸಬೇಕಾದ ಅಂಶ. ಕಲ್ಯಾಣದ ಚಾಲುಕ್ಯರಿಗೂ ಕಾವೇರಿ ನದಿಯ ದಡದಲ್ಲಿರುವ ರಾಜಧಾನಿ ಪಟ್ಟಣವಾದ ಊರೈಯೂರ ಚೋಳರಿಗೂ ಮೇಲಿಂದ ಮೇಲೆ ಕದನಗಳಾಗುತ್ತಿದ್ದವು. ಬಲಾಢ್ಯರಾದ ಚೋಳರು ಹಿಂದಿನ ಮೈಸೂರು ಸಂಸ್ಥಾನ ಕೆಲವು ಭಾಗವನ್ನು ತಮ್ಮ ಪರಾಕ್ರಮದಿಂದ ಆಕ್ರಮಿಸಿದುದಲ್ಲದೆ, ಬಳ್ಳಾರಿ ಜಿಲ್ಲೆ, ಹಿಂದಿನ ಹೈದರಾಬಾದ

ಕರ್ನಾಟಕದ ಕೆಲವು ಪ್ರದೇಶಗಳ ಮೇಲೆ ದಾಳಿ ಮಾಡುತ್ತಲಿದ್ದರು. ಅಲ್ಲದೆ ಅವರು ಕೊಲ್ಲಾಪುರದವರೆಗೂ ಸಾಗಿಹೋಗಿದ್ದರೆಂದು ಇತಿಹಾಸವು ತಿಳಿದಿದೆ. (ಅಮೃತಮಹಾದೇವ ಅಣ್ಣಿಗೇರಿ, ೧೯೬೦, ಪು. ೨೨) ಕಲ್ಯಾಣದ ಚಾಲುಕ್ಯರಾದರೂ ಚೋಳರ ಬಲವನ್ನು ಮುರಿಯಲು ಹೆಣಗಾಡಿದರು. ಚಾಲುಕ್ಯ ಚೋಳರಲ್ಲಿ ಆದ ಯುದ್ಧಗಳಲ್ಲಿ ಒಂದು ಅಣ್ಣಿಗೇರಿಯ ಸೀಮೆಯೊಳಗೆ ಆಯಿತು. ಚಾಲುಕ್ಯ ೧ನೆಯ ಸೋಮೇಶ್ವರನ ಕಾಲಕ್ಕೆ ಕ್ರಿ.ಶ. ೧೦೪೨ರಲ್ಲಿ ಚೋಳರು ಪುರಿನಗರ ಲಕ್ಕೇಶ್ವರದ ಮೇಲೆ ಭರದಿಂದ ದಂಡೆತ್ತಿ ಬಂದ ಅಲ್ಲಿಯ ಜೈನ ಮಂದಿರಗಳನ್ನು ಧ್ವಂಸಮಾಡಿದರು. ಚೋಳರಾಜನಾದ ೧ನೆಯ ರಾಜಾಧಿರಾಜನು ಸ್ವತಃ ಈ ದಾಳಿಯ ಧುರೀಣತ್ವವನ್ನುವಹಿಸಿ ಬಂದಿದ್ದನೆಂದು ತೋರುತ್ತದೆ. ಈ ಚೋಳರಾಜನು ಶೈವನಾದುದರಿಂದ ಬೆಳ್ವಲನಾಡನ್ನು ಹೊಕ್ಕು ಗಂಗಪೆರ್ಮಾಡಿಯು ಅಣ್ಣಿಗೇರಿಯಲ್ಲಿ ಕಟ್ಟಿಸಿದ ಜೈನ ಬಸದಿಗಳನ್ನು ನಾಶಗೊಳಿಸಿದನು. ಆದರೆ ಅವನು ಇಲ್ಲಿಂದ ಬದುಕಿ ಹಿಂದಿರುಗಲಿಲ್ಲ ಈ ಅಣ್ಣಿಗೇರಿಯ ಕಾಳಗದಲ್ಲಿ ೧ನೆಯ ಸೋಮೇಶ್ವರನೊಡನೆ ಮರಣಹೊಂದಿದನು ಅಣ್ಣಿಗೇರಿಯ ಶಾಸನದಿಂದ (ಸೊರಬದ ೩೨೫ ಎಫಿಗ್ರಾಫಿಯ ಕರ್ನಾಟಕ) ತಿಳಿದುಬರುತ್ತದೆ.

### ೨.೩. ಕಲಚೂರಿಯರು

ಕಲ್ಯಾಣದ ಚಾಲುಕ್ಯರನ್ನು ತಳ್ಳಿ ಪಟ್ಟಕ್ಕೆ ಬಂದವರು. ಕಳಚೂರಿಗಳು ಈ ವಂಶದ ಬಗ್ಗೆ ನವಲಗುಂದ ತಾಲೂಕಿನಲ್ಲಿ ಸಿಗುವುದು ಅಣ್ಣಿಗೇರಿಪುರದ ವೀರಪ್ಪ ದೇವಾಲಯದಲ್ಲಿ ಅಶ್ವತ್ಥಕಟ್ಟಿ ಮರದ ಕಟ್ಟೆ ಅಧಿಷ್ಠಾನದಲ್ಲಿ ಇರುವ ಶಾಸನದಿಂದ (S.I.I. xv, No 130, B.K. No 209, of 1928-29) ಲಿಪಿಯ ದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೧-೧೨ನೆ ಶತಮಾನ ಈ ಬಿಜ್ಜಳ ಮತ್ತು ಆತನ ಬಿರುದು ಚಕ್ರವರ್ತಿಯನ್ನು ಉಲ್ಲೇಖಿಸುತ್ತದೆ. ಅವನು ರಾಯಮುರಾರಿ ಸೋಪಿದೇವಸಿರಬಹುದು. ಹರಿದೇವ ಚಮೂಪನ ಹೆಸರನ್ನು ತಿಳಿಸುತ್ತದೆ. ಕಳಚೂರಿ ವೆಂಕನಾಯಕ ಹೆಸರು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಉಳವಿಬಸಪ್ಪ ದೇವಾಲಯದ ಮುಂದೆ ಕಳಚುರ್ಯ ಬಿಜ್ಜಳನ ಕಾಲದಲ್ಲಿ ಕ್ರಿ.ಶ. ೧೧೬೨ ರಲ್ಲಿ ಬರೆದ ಶಾಸನವಿದೆ ಇದರಲ್ಲಿ ಪಟ್ಟಣವೆರ್ಗಡೆಯಾದ ದಂಡನಾಯಕ ಶ್ರೀಧರಯ್ಯನು ಚಂಡಿಕಾದೇವಿಯ ಪೂಜೆಗೆ ಮತ್ತು ನೈವೇದ್ಯಕ್ಕೆ ಭೂಮಿಯನ್ನು ದಾನಮಾಡಿದನೆಂದು ಹೇಳಿದೆ. (ಡಾ.ಎಂ.ಎಂ.ಕಲಬುರ್ಗಿ, ೧೯೭೬, ಪು.೨೧)

### ೨.೪. ಹೊಯ್ಸಳರು

ಕಳಚೂರಿ ರಾಜರ ನಂತರ ಬಂದವರು ಹೊಯ್ಸಳರು. ಈ ವಂಶದ ಬಗ್ಗೆ ನವಲಗುಂದ ತಾಲ್ಲೂಕಿನಲ್ಲಿ ಕುರುಹುಗಳಿವೆ. ಅಣ್ಣಿಗೇರಿಯ ಅಮೃತೇಶ್ವರ ಗುಡಿಯ ಮಂಟಪದೊಳಗೆ ವೀರಬಲ್ಲಾಳನ ೧೫ ನೆಯ ವರ್ಷದ ಕ್ರಿ.ಶ. ೧೨೦೫ ಒಂದು ಶಾಸನವಿದೆ. ಈ ಶಾಸನ ಇಮ್ಮಡಿ ವೀರಬಲ್ಲಾಳನ ಕಾಲಕ್ಕೆ ಸೇರಿದೆ. ಮಾಂಡಲಿಕ ಬಾಚಣನು ಅಣ್ಣಿಗೇರಿ ರಾಜಾಧಾನಿಯಿಂದ ಆಳುತ್ತಿದ್ದನು. ಅಮೃತೇಶ್ವರ ದೇವರಿಗೆ ದಾನ ಮಾಡಿದ್ದನ್ನು ದಾಖಲಿಸಿದೆ. ಶಾಸನದ ಕೊನೆಯಲ್ಲಿ ವೀರಬಲ್ಲಾಳ ದೇವನ ಹೆಸರನ್ನು ಹೆಸರಿಸಿದೆ. (S.I.I xv 224, B.K. No. 195, of 1928-29)

ಅದೇ ಗುಡಿಯ ಪ್ರಕಾರದಲ್ಲಿ ಮತ್ತೊಂದು ಶಾಸನವು ಹೊಯ್ಸಳ ೨ನೆಯ ವೀರಬಲ್ಲಾಳನ ೧೨ನೆಯ ವರುಷದಲ್ಲಿ ಎಂದರೆ ಕ್ರಿ.ಶ. ೧೨೦೨ರಲ್ಲಿ ಹುಟ್ಟಿದೆ. ಇದು ವೀರಬಲ್ಲಾಳನ ಅಮಿತ (ಅಮೃತಕಲ್ಲು) ಮಸಣಯ್ಯ ಬಸವ, ಎಂಬ ನಾಲ್ವರು ದಂಡನಾಯಕರಲ್ಲಿ ಒಬ್ಬನಾದ ಬಸವಯ್ಯ ದಂಡನಾಯಕನು ಸ್ವಯಂಭು ಅಮೃತೇಶ್ವರ ದೇವರ ಪೂಜೆಗಾಗಿ ಭೂದಾನ ಮಾಡಿದನೆಂದು ಉಲ್ಲೇಖಿಸುತ್ತದೆ. (ಅಮೃತ ಮಹಾದೇವ ಅಣ್ಣಿಗೇರಿ, ೧೯೬೦, ಪು. ೧೯)

### ೨.೫. ಯಾದವರು

ಸಾಮಂತರಾಗಿದ್ದ ಯಾದವರು ತಮ್ಮ ಸಾರ್ವಭಾಮರಾದ ಕಲ್ಯಾಣದ ಚಾಳುಕ್ಯರನ್ನು ಪದಚ್ಯುತಗೊಳಿಸಿ ಕರ್ನಾಟಕದ ಚಕ್ರವರ್ತಿಗಳಾದರು. ಈ ತಾಲ್ಲೂಕಿನಲ್ಲಿ ಸಿಗುವ ಈ ಮನೆತನಕ್ಕೆ ಸಂಬಂಧಿಸಿದಂತೆ ಅಮೃತೇಶ್ವರನ ದೇಗುಲದ ಪ್ರಾಕಾರದಲ್ಲಿ ಭಲ್ಲಮದೇವನ ಕ್ರಿ.ಶ. ೧೧೮೯ರ ಒಂದು ಶಾಸನವಿದೆ. ಸ್ವಯಂಭು ಅಮೃತೇಶ್ವರ ದೇವರಿಗೆ ಪ್ರತಿ ಅಮವಾಸ್ಯೆಯ ಪೂಜೆ ಮತ್ತು ನೈವೇದ್ಯಕ್ಕಾಗಿ ಮಹಾಮಂಡಲೇಶ್ವರ ಬಾಚಿದೇವರಸನು ಧಾನ್ಯವನ್ನು ದಾನ ಮಾಡಿದ್ದಾನೆ. ಈ ದಾನವನ್ನು ರಾಜರು ತ್ರಿವರ್ಗದವರು ಸಮಯಗಳು ಮತ್ತು ಒಂದು ಸಾವಿರ (ದೇವಪುತ್ರರು, ಮಹಾಜನರು?) ಮಗಾಡನಗಳು. ರಕ್ಷಿಸುವವರೆಂದು ಇದರಲ್ಲಿ ಹೇಳಿದೆ. ದೇವಪುತ್ರರು ಎಂಬ ವಿಶೇಷಣ ಇಲ್ಲಿ ಲಕ್ಷಿಸತಕ್ಕಂತಹದು, ಈ ಊರ ಮಹಾಜನರು ದೇವರಿಗೆ ಒಳ್ಳೆ ಪ್ರಿಯರಾದವರು, ಎಂದರೆ ಅಂತಹ ಸಜ್ಜನಿಕೆ ಅವರದು. ಅಂತಹ ಸುಚಾರಿತ್ರೆ ಅವರದು (ಅಮೃತ ಮಹಾದೇವ ಅಣ್ಣಿಗೇರಿ, ಪು. ೧೪)

### ೨.೬. ವಿಜಯನಗರದ ಅರಸರು

ನವಲಗುಂದ ತಾಲ್ಲೂಕಿನಲ್ಲಿ ವಿಜಯನಗರದ ಅರಸರ ಶಾಸನಗಳು, ಗುಡಿಸಾಗರದ ಹಡಪದ ಮಲ್ಲೇಶ್ವರಪ್ಪ ಮನೆಯ ಸಮೀಪದಲ್ಲಿರುವ ಕ್ರಿ.ಶ. ೧೫೪೭, ಜೂನ್ ೨೭, ರ ಶಾಸನವು ಕ್ಷೌರಿಕನಿಗೆ ದಾನ ಮಾಡಿದ್ದನ್ನು ಹೆಸರಿಸಿದೆ. ಶಾಸನದಲ್ಲಿ ಸದಶಿವರಾಯನ ಹೆಸರು ದಾಖಲಿಸಿದೆ. (S.I.I. xv. No. 222, of 1528-29) ಉಳಿದ ವಿವರ ಅಸ್ಪಷ್ಟ ಅಣ್ಣಿಗೇರಿಯ ಅಮೃತೇಶ್ವರ ದೇವಾಲಯದ ದಕ್ಷಿಣದ್ವಾರದ ಬಲ ಮಗ್ಗಲಲ್ಲಿರುವ ಅಚ್ಯುತರಾಯನ ಕ್ರಿ.ಶ. ೧೫೩೯ ಶಾಸನವು ಬಾಸ್ಕರ ಕ್ಷೇತ್ರದಲ್ಲಿ (ಹಂಪಿಯಲ್ಲಿ) ವಿಠಲೇಶ್ವರ ದೇವರ ಮುಂದೆ ರಾಜನು ಬ್ರಾಹ್ಮಣರಿಗೆ ಕೊಟ್ಟ ಆನಂಧನಿಧಿ ಎಂಬ ದಾನವನ್ನು ಅಮೃತೇಶ್ವರ ದೇವಾಲಯದಲ್ಲಿ ಎಂದು ಶಾಸನವು ಹೇಳುತ್ತದೆ.

## ಅಧ್ಯಾಯ ಮೂರು

# ಶಾಸನಗಳ ವೈವಿಧ್ಯತೆ

### ೧. ಪೀಠಿಕೆ

ಶಾಸನ ಎಂದರೆ ರಾಜಾಜ್ಞೆ ಎಂದರ್ಥ. (ಸಿ.ಪಿ.ಕೆ. ೧೯೯೩ ಪು. ೩೬) ಶುಕ್ರನೀತಿ ಸಾರದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ 'ರಾಜಾಜ್ಞೆ' ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಈ ಶಾಸನಗಳು ರಾಜ ಪ್ರಶಸ್ತಿ ಶಾಸನಗಳಾಗಿರಬಹುದು. ವೀರಗಲ್ಲುಗಳು, ಮಾಸ್ತಿಗಲ್ಲು, ಅಥವಾ ಮಹಾಸತಿಗಲ್ಲು, ನಿಷಧಿಗಲ್ಲುಗಳು ಇವು ಎಲ್ಲವನ್ನು ಶಾಸನ ಎಂದೇ ಕರೆಯಲಾಗಿದೆ.

ಪ್ರಸ್ತುತ ನವಲಗುಂದ ತಾಲ್ಲೂಕಿಗೆ ಸಬಂಧಿಸಿದಂತೆ ಒಟ್ಟು ದೊರೆತ ಶಾಸನಗಳು ೭೧. ಇವುಗಳಲ್ಲಿ ವೀರಗಲ್ಲುಗಳು ಮಾಹಸತಿಗಲ್ಲುಗಳು ದಾನ ಶಾಸನಗಳು ನಿಷಧಿಗಲ್ಲುಗಳು ಹೀಗೆ ವೈವಿಧ್ಯಮಯ ರೂಪದಲ್ಲಿ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ದೊರೆತ ಶಾಸನಗಳ ವೈವಿಧ್ಯಮಯ ಚಿತ್ರಣವನ್ನು ಇಲ್ಲಿ ನೀಡಲಾಗಿದೆ.

### ೨.೧ ದಾನ ಶಾಸನಗಳು

ದಾನ ಶಾಸನಗಳು ಹೆಚ್ಚಿನ ಮಟ್ಟಿಗೆ ಧಾರ್ಮಿಕ ದತ್ತಿಯನ್ನು ಉದ್ದೆಶವುಳ್ಳ ಶಾಸನಗಳಾಗಿವೆ. ಈ ಶಾಸನಗಳ ಧಾಮಿಕ ದತ್ತಿಯ ಉದ್ದೇಶಿಸುವುದರ ಜೊತೆಗೆ ಖಾಸಗಿ ವ್ಯಕ್ತಿಗಳಿಗೆ ನೀಡಿದ ದಾನಗಳನ್ನು ದಾಖಲುಮಾಡಿವೆ. ಉದಾ. ದೇವಾಲಯದಲ್ಲಿ ನಡೆಯುವ ಪೂಜೆ, ಪುನಸ್ಕಾರಗಳಿಗೋ, ಒಂದು ಮಠದಲ್ಲಿ ನಡೆಯುವ ವಿದ್ಯಾದಾನಕ್ಕೂ ದೇವಾಲಯದಲ್ಲಿ ನಡೆಯುವ ಪೂಜೆ, ಪುನಸ್ಕಾರಗಳಿಗೂ ಮಠದಲ್ಲಿ ನಡೆಯುವ ವಿದ್ಯಾದಾನಕ್ಕೂ, ದೇವಾಲಯದಲ್ಲಿ ಪೂಜೆ ಮಾಡುವ ಪೂಜಾರಿಗಳಿಗೂ ನರ್ತಿಸುವ ನರ್ತಕಿಯರಿಗೂ, ವಾದ್ಯಗಾರರಿಗೂ, ವಿದ್ಯಾದಾನ ಮಾಡುವ ಅಧ್ಯಾಪಕ ಮತ್ತು ವಿದ್ಯಾರ್ಥಿ ವೃಂದಕ್ಕೂ ಅರವಟ್ಟಿಗೆ, ಕೆರೆ ಬಾವಿ, ಮುಂತಾದ ಲೋಕೋಪಯೋಗಿ ಕಾರ್ಯಗಳಿಗೂ ವ್ಯಕ್ತಿಯೊಬ್ಬನ ಸೇವೆ ಪರಾಕ್ರಮಗಳನ್ನು ಮನ್ನಿಸಿಯೇ ನೀಡಿದ ದಾನವಾಗಿರುತ್ತವೆ. (ಆರ್.ಶೇಷಶಾಸ್ತ್ರಿ ೨೦೦೫ ಪು. ೬) ದಾನವಾಗಿ ನೀಡುವ ಆರ್ಥಿಕ ಮೂಲ ಭೂಮಿಯಾಗಿರಬಹುದು. ನಗದು ರೂಪದ ಹಣವಾಗಿರಬಹುದು. ಅಥವಾ ಅಗತ್ಯವಸ್ತುಗಳ ಪೂರೈಕೆ ಇರಬಹುದಾಗಿದೆ.

ಪ್ರಸ್ತುತ ನವಲಗುಂದ ತಾಲೂಕಿನಲ್ಲಿ ಸಂಬಂಧಿಸಿದಂತೆ, ಅಣ್ಣಿಗೇರಿಯ ಅಮೃತೇಶ್ವರ ದೇವಾಲಯದ ದಕ್ಷಿಣ ದ್ವಾರ ಬಲಮಗ್ಗುಲಲ್ಲಿ ಒಂದು ಶಾಸನವಿದೆ. ಅದು ವಿಜಯನಗರದ ಅಚ್ಚುತರಾಯ ಕಾಲದ್ದಾಗಿದ್ದು

ಈ ಶಾಸನದ ಕಾಲ ಕ್ರಿ.ಶ. ೧೫೫೯ ಬಾಸ್ಕರ ಕ್ಷೇತ್ರದಲ್ಲಿ (ಹಂಪಿಯಲ್ಲಿ) ವಿಠಲೇಶ್ವರ ದೇವರ ಮುಂದೆ ರಾಯನು ಬ್ರಾಹ್ಮಣರಿಗೆ ಕೊಟ್ಟ ಆನಂಧನಿದಿ ಎಂಬ ದಾನವನ್ನು ಅಮೃತೇಶ್ವರ ದೇವಾಲಯದ ಶಾಸನಕಲ್ಲು ಮೇಲೆ ಬರೆದಿದೆ. ಎಂದು ಶಾಸನ ತಿಳಿಸುತ್ತದೆ. (ಅಮೃತ ಮಹಾದೇವ ಅಣ್ಣಿಗೇರಿ ೧೯೬೦ ಪು. ೧೮) ಅದೆ ಗುಡಿಯ ಅದೇ ದ್ವಾರದ ಹೊರಬದಿಯ ಹತ್ತಿರ ಕಂಬದ ಮೇಲೆ ಹೊಯ್ಸಳ ವೀರಬಲ್ಲಾಳನ ಶಾಸನವಿದೆ. ಇದರ ಕಾಲ ಕ್ರಿ.ಶ. ೧೧೯೭ ಮಹಾ ಪ್ರಧಾನ ಲಕ್ಷಿದೇವ ದಣ್ಣಾಯಕನ ಅಳಿಯ ಸಂಗಯ್ಯ ದಣ್ಣಾಯಕನು ರಾಜಧಾನಿ ಅಣ್ಣಿಗೇಱಿಯ ಅಮೃತೇಶ್ವರ ದೇವರಿಗೆ ಭೂಮಿಯನ್ನು ದತ್ತಿಯಾಗಿ ಬಿಟ್ಟಿದ್ದನ್ನು ಇದರಲ್ಲಿ ಉಲ್ಲೇಖಿಸಲಾಗಿದೆ.

ಅದೇ ದ್ವಾರದ ಒಳ ಮಗ್ಗುಲ ಕಂಬದ ಮೇಲೆ ವೀರಭುಜಬಲ ಅರಿಯ ರೇವಿಸೆಟ್ಟಿ ಎಂಬ ಅಧಿಕಾರಿ ರಾಜಧಾನಿ ಪಟ್ಟಣದ ಅಣ್ಣಿಂಗೆಱೆಯ ಸ್ವಯಂಭು ಅಮೃತೇಶ್ವರ ದೇವರಿಗೆ ಪೆನ್ನಾಯ ಸುಂಕವನ್ನು ದಾನ ಮಾಡಿದನೆಂದು ಬರೆದಿದೆ. ಕ್ರಿ.ಶ. ೧೨೩೧ ರ ಶಾಸನ ಇದನ್ನು ತಿಳಿಸುತ್ತದೆ. ಹಾಗೂ ಅಮೃತೇಶ್ವರನ ಗುಡಿಯ ಮಂಟಪದೊಳಗೆ ವೀರಬಲ್ಲಾಳನ ೧೫ನೆಯ ವರುಷದ ಕ್ರಿ.ಶ. ೧೨೦೫ ಒಂದು ಶಾಸನವಿದೆ. ಪಂಡಿತಯ್ಯ ದಣ್ಣಾಯಕನು ಬೆಳ್ವೊದೇಶವನ್ನು ಆಳುತ್ತಿರುವ ಕಾಲದಲ್ಲಿ ಸ್ವಂಯಭು ಅಮೃತೇಶ್ವರ ದೇವರಿಗೆ ಎಲೆ, ಅಡಿಕೆ, ನೈವೇದ್ಯ ಮೊದಲಾದವುಗಳಿಗಾಗಿ ಶೆಟ್ಟಿಯ ದೇವಯ್ಯನು ಹೊನ್ನನ್ನು ದಾನ ಮಾಡಿದನೆಂದು ಈ ಶಾಸನ ತಿಳಿಸುತ್ತದೆ. (ಆರ್.ಶೇಷಶಾಸ್ತ್ರಿ ೨೦೦೫, ಪುಟ. ೧೮)

ಯಾದವ ಬಿಲ್ಲಮದೇವನ ಕ್ರಿ.ಶ. ೧೧೮೯ ಒಂದು ಶಾಸನವಿದೆ. ಸ್ವಯಂಭು ಅಮೃತೇಶ್ವರ ದೇವರಿಗೆ ಪ್ರತಿ ಅಮವಾಸ್ಯೆಯ ಪೂಜೆ ಮತ್ತು ನೈವೇದ್ಯಕ್ಕಾಗಿ ಮಹಾ ಮಂಡಲೇಶ್ವರ ಬಾಚಿದೇವರಸನು ಧಾನ್ಯವನ್ನು ದಾನ (ಆರ್.ಶೇಷಶಾಸ್ತ್ರಿ, ಪು. ೧೯) ಹೊಯ್ಸಳ ೩ನೇ ವೀರಬಲ್ಲಾಳನ ೨ ನೆಯ ಕ್ರಿ.ಶ. ೧೨೦೨ ರ ಈ ವೀರಬಲ್ಲಾಳನ ಅಮಿತ (ಅಮೃತಕ ಕಲ್ಲು) ಮಸಣಯ್ಯ, ಬಸವ ಎಂಬ ನಾಲ್ವರು ದಂಡನಾಯಕರಲ್ಲಿ ಒಬ್ಬನಾದ ಬಸವಯ್ಯ ದಂಡನಾಯಕನು ಸ್ವಯಂಬು ಅಮೃತೇಶ್ವರ ದೇವರ ಪೂಜೆಗಾಗಿ ಮಾಡಿದ ಭೂದಾನ ಉಲ್ಲೇಖವಿದೆ. ಚಾಲುಕ್ಯ ವೀರ ಸೋಮೇಶ್ವರನ ಆಳ್ವಿಕೆಯ ೫ ನೇ ವರ್ಷ ಬಮ್ಮದೇವದಂಡಾಧಿಪನ ಕೆಳಗೆ ಅಧಿಕಾರಿಯಾಗಿದ್ದ ಮಹಾಪ್ರಧಾನ ಬಲ್ಲಿಯ ಸಾಹಣಿಯ ಸೇವಕನಾಗಿ, ಬಳ್ವಲನಾಡಿನ ಹೆಗ್ಗಡೆಯಾಗಿ ಆಳುತ್ತಿದ್ದ ಕೇಶವಭಟ್ಟಯ್ಯ ದಂಡನಾಯಕನು ಅಣ್ಣಿಗೆಱೆಯ ಐದು ಬ್ರಹ್ಮಪುರಿಗಳ ಬ್ರಾಹ್ಮಣರಿಗೆ ಭೂಮಿಯನ್ನು ದಾನವಾಗಿ ಕೊಟ್ಟನೆಂದು ಉಲ್ಲೇಖಿಸಿದೆ.

ಕಳಚುರ್ಯ ಬಿಜ್ಜಳನ ಕಾಲದಲ್ಲಿ ಕ್ರಿ.ಶ. ೧೧೬೨ ರಲ್ಲಿ ಬರೆದ ಒಂದು ಶಾಸನದಲ್ಲಿ ಪಟ್ಟಣವೆರ್ಗಡೆಯಾದ ಕೇಶಿರಾಜನ ಭಿನ್ನಹದ ಮೇರೆಗೆ ಬೆಳ್ವಲನಾಡಿನ ಪೆರ್ಗಡೆಯಾದ ದಂಡನಾಯಕ ಶ್ರೀಧರಯ್ಯನು ಅಣ್ಣಿಗೇರಿಯ ಚಂಡಿಕಾದೇವಿಯ ಪೂಜೆಗೆ ಮತ್ತು ನೈವೇದ್ಯಕ್ಕೆ ಭೂಮಿಯನ್ನು ದಾನಮಾಡಿದನೆಂದು ಈ ಶಾಸನ ಉಲ್ಲೇಖಿಸಿದೆ.

ಚಾಲುಕ್ಯರ ವೀರ ಸೋಮೇಶ್ವರನ ಕಾಲದ ಕ್ರಿ.ಶ. ೧೧೮೪ ಶಾಸನದ ಪ್ರಕಾರ ಕಲಚುರಿಯ ಕಾಲಕ್ಕೆ ಅಗ್ನಿಯಂತಿದ್ದ ವೀರ ಬಮ್ಮರಸ ದಣ್ಣಾಯಕನು ಗದುಗಿನ ತ್ರಿಕೂಟೇಶ್ವರ ದೇವರಿಗೆ ದತ್ತಿಯನ್ನು ಬಿಡುವ ಕಾಲದಲ್ಲಿ ಅಣ್ಣೀಗೇರಿಯ ವೀರಬಮ್ಮೇಶ್ವರ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಅಲ್ಲಿ ನಡೆಯುವ ಪೂಜೆಗಾಗಿ ಮತ್ತು ಮಹೇಶ್ವರಕೂಟಕ್ಕೆ ಭೂಮಿಯನ್ನು ದಾನ ಮಾಡಿದ್ದಾನೆಂದು ಈ ಶಾಸನ ಉಲ್ಲೇಖಿಸುತ್ತದೆ. ( ಸಿ.ಮಹಾದೇವ ೨೦೦೬ ಪುಟ ೧೨೧) ಬೆಣ್ಣೂರದ ಕ್ರಿ.ಶ. ೧೨ ನೇ ಶತಮಾನದ ಶಾಸನವು ಚಾಲುಕ ದೊರೆಯನ್ನು ಉಲ್ಲೇಖಿಸಿದೆ.

ಭೂದಾನ ಮಾಡಿದ್ದನ್ನು ಈ ಶಾಸನ ದಾಖಲಿಸಿದೆ. ಶಾಸನದ ಕೊನೆಯ ಭಾಗ ಮಣಿನಾಗೋಜನ ಹೆಸರನ್ನು ಮತ್ತು ಬಡಗಿಗೆ ದಾನ ಮಾಡಿದ್ದನ್ನು ದಾಖಲಿಸುತ್ತದೆ. (ಎಂ.ಎಂ. ಕಲಬುರ್ಗಿ ೧೯೭೫ ಪುಟ ೨೦) ಕುರಹಟ್ಟಿಯ ಕ್ರಿ.ಶ. ೧೨ ನೆಯ ಶತಮಾನದ ಶಾಸನವು ಚಾಲುಕ್ಯ ದೊರೆಯ ಕಾಲವನ್ನು ಉಲ್ಲೇಖಿಸಿದೆ. ಈ ಶಾಸನ ಶಂಕರದೇವರಿಗೆ ದೀಪ ಉಳಿಸುವುದಕ್ಕಾಗಿ ಎಣ್ಣೆಗಾಣ ಮತ್ತು ಹಲವಾರು ದಾನಗಳನ್ನು ಮಾಡಿದ್ದನ್ನು ದಾಖಲಿಸಿದೆ. ಈ ದಾನವನ್ನು ಆಗ್ರಹಾರದ ಮಹಾ ಜನಗಳು ಮತ್ತು ಉಳಿದವರು ಮಾಡಿದರೆಂದಿದೆ. (ಸಿ. ಮಹಾದೇವ ೨೦೦೬, ಪು ೨೮) ಬದ್ರಾಪುರದ ಶ.ಕ ೧೪೬೧ ವಿಕಾರಿ. ಬಾದ್ರಪದ ಶು. ೧೨ ಮಂಗಳವಾರ ಕ್ರಿ.ಶ. ೧೫೩೯ ಆಗಸ್ಟ್ ೨೬ರ ಶಾಸನವು ಬ್ರಾಹ್ಮಣರಿರಗೆ ಆನಂಧ ನಿಧಿ ದಾನಮಾಡಿದ್ದನ್ನು ದಾಖಲಿಸಿದೆ ತುಂಗಭದ್ರಾ ದಂಡೆಯ ಮೇಲೆ ವಿಠಲೇಶ್ವರ ದೇವರಿಗೆ ಎದುರಿನಲ್ಲಿ ಈ ದಾನವನ್ನು ರಾಜನು ಮಾಡಿದನು. ಅಣ್ಣಿಗೇರಿಯ ಅಮೃತೇಶ್ವರ ದೇವರ ಎದುರಿನಲ್ಲಿ ಈ ದಾನವನ್ನು ದಾಖಲಿಸಲಾಗಿದೆ. ಗುಡಿಸಾಗರದ ಕ್ರಿ.ಶ. ೧೫೪೭, ಜೂನ್ ೨೭ ರ ಶಾಸನವು ಕ್ಷೌರಿಕನಿಗೆ ದಾನ ಮಾಡಿದ್ದನ್ನು ಶಾಸನದಲ್ಲಿ ಸದಾಶಿವರಾಯನ ಹೆಸರನ್ನು ದಾಖಲಿಸಿದೆ. ಬೆಳವಟಿಗೆಯ ಕ್ರಿ.ಶ. ೧೬೭೯ ಜುಲೈ ೩೧ ರ ಶಾಸನವು ಸಂಗಪ್ಪನಿಗೆ ಗೌಡಿಕೆ, ಮತ್ತು ಶಾಸಭೋವಿಕೆ ಕೊಟ್ಟಿದ್ದನ್ನು ದಾಖಲಿಸಿದೆ. ದೇಸ ಕುಲಕರ್ಣಿಕನ ಹೆಸರು, ಹನುಮಂತ ಮತ್ತು ಶಂಕರಲಿಂಗನ ಹೆಸರು ಈ ಶಾಸನದಲ್ಲಿ ದಾಖಲಿಸಲ್ಪಟ್ಟಿದೆ. (ಸಿ.ಮಹಾದೇವ ೨೦೦೬, ಪುಟ ೧೪೫) ಹನ್ಸಿಯ ಕ್ರಿ.ಶ. ಸುಮಾರು ೧೨ ನೆಯ ಶತಮಾನದ ಶಾಸನವು ವೀರ ಸ್ಮರಣಾರ್ಥ ಭೂಮಿದಾನ ಮಾಡಿದ್ದನ್ನು ದಾಖಲಿಸಿದೆ.

**೨.೨. ವೀರಗಲ್ಲು ಶಾಸನಗಳು :**

ವೀರನೊಬ್ಬನ ಸ್ಮಾರಕವಾಗಿ ನಿಲ್ಲಿಸಿದ ಶಿಲೆಯೇ ವೀರಶಾಸನ ಅಥವಾ ವೀರಗಲ್ಲು ಶಾಸನ. ಯಾವುದೇ ಹೋರಾಟದಲ್ಲಿ ಮಡಿದ ವೀರನ ಸ್ಮಾರವಾಗಿ ನೆಟ್ಟಕಲ್ಲುಗಳನ್ನು ವೀರಗಲ್ಲುಗಳೆಂದು ಕರೆಯುತ್ತಾರೆ. ಈ ವೀರಗಲ್ಲುಗಳು ಬರಹವನ್ನು ಮಾತ್ರವಲ್ಲದೆ, ಶಿಲ್ಪದ ವಿವರಗಳನ್ನು ಹೊಂದಿರುತ್ತವೆ. ಅಂದರೆ, ಶಾಸನ ಮತ್ತು ಶಿಲ್ಪ ಆ ವೀರಗಲ್ಲು ಯಾವ ವೀರನ ಸ್ಮಾರಕವಾಗಿದಿದ್ದಿಯೋ ಆ ವೀರನ ಪರಾಕ್ರಮವನ್ನು ಸಾರುವಂತಹವೇ ಆಗಿರುತ್ತವೆ.

ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು, ಅವನ ಪರಾಕ್ರಮ ಲೋಕಕ್ಕೂ ತಿಳಿಯಲೆಂದು ನೆಡುವುದು ಲೌಕಿಕ ಉದ್ದೇಶವಾಗಿದೆ. ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ತಮ್ಮ ಕರ್ತವ್ಯ ಎಂದು ಭಾವಿಸಿ, ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೂ, ಕೈಲಾಸವೂ, ವೈಕುಂಠವೂ ಪ್ರಾಪ್ತವಾಗುತ್ತದೆಯೆಂದು ನಂಬಿಕೆಗಾಗಿ ವೀರಗಲ್ಲುಗಳನ್ನು ನೆಡುವುದು ಇವು ಪರಾಮಾರ್ಥಿಕ ಉದ್ದೇಶವಾಗಿದೆ. (ಆರ್. ಶೇಷಾಶಾಸ್ತ್ರಿ ೧೯೮೨, ಪುಟ ೭)

ಈ ಎಲ್ಲಾ ಮಾಹಿತಿಗಳ ಆಧಾರದ ಮೇಲೆ ಹೆಳುವುದಾದರೆ ವೀರಗಲ್ಲು ನಿಲ್ಲಿಸುವಲ್ಲಿನ ಪ್ರಮುಖ ಉದ್ದೇಶ ವೀರನ ಪರಾಕ್ರಮ ಲೋಕಕ್ಕೆ ತಿಳಿಯುವಂತೆ ಮಾಡಿ ಅದರಿಂದ ಅಂದಿನ ತಲೆಮಾರಿನ ಸಂಸ್ಕೃತಿಯನ್ನು ತಿಳಿಸುತ್ತದೆ. (ಆರ್.ಶೇಷಶಾಸ್ತ್ರಿ ೧೯೮೨, ಪು. ೭೨)

ಈ ವೀರಗಲ್ಲುಗಳ ಮಧ್ಯೆ ಪಟ್ಟಿಕೆಯಲ್ಲಿ, ವೀರಗಲ್ಲನ್ನು ನಿಲ್ಲಿಸಿದ ಉದ್ದೇಶ ಸ್ಮರಣಾರ್ಥಕವಾಗಿ ನಿಲ್ಲಿಸಿದವನ ಹೆಸರು ಬರೆಯಲ್ಪಟ್ಟಿರುತ್ತದೆ. ಪ್ರಸ್ತುತ ಅಧ್ಯಯನ ನವಲಗುಂದ ತಾಲೂಕಿನ ವೀರಗಲ್ಲುಗಳ ಪ್ರಸ್ತಾವನೆ ಇಲ್ಲಿದೆ. ಕ್ರಿ.ಶ. ೧೨-೧೩ನೇ ಶತಮಾನಕ್ಕೆ ಸೇರಿದ ವೀರಗಲ್ಲುಗಳನ್ನು ಕಾಣಬಹುದು. ನಾವಳ್ಳಿ ಗ್ರಾಮದ ಕಲ್ಮೇಶ್ವರಗುಡಿ ಆವರಣದಲ್ಲಿ ಪೂರ್ವಕ್ಕೆ ಎರಡು, ದಕ್ಷಿಣಕ್ಕೆ ಎರಡು ವೀರಗಲ್ಲು ನಿಲ್ಲಿಸಲಾಗಿದೆ. ಈ ಕಾರಣದಿಂದ ವಿವರ ಅಪೂರ್ಣವಾಗಿದೆ. ದಕ್ಷಿಣಕ್ಕಿರುವ ಒಂದು ವೀರಗಲ್ಲಿನಲ್ಲಿ ಹೋರಾಟದಲ್ಲಿ ಸತ್ತ ವೀರ ಮತ್ತು ಅವನ ಸತಿ ಇಬ್ಬರ ಚಿತ್ರಣವೂ ಇದ್ದು ಮೇಲ್ಭಾಗದಲ್ಲಿ, ಸ್ವರ್ಗಸ್ಥರಾದಂತೆಯೂ ಚಿತ್ರಿಸಲಾಗಿದೆ. ಇವುಗಳ ಶೈಲಿಯನ್ನು ಗಮನಿಸಿದರೆ ಇವುಗಳೂ ಕೂಡ ಕಲ್ಯಾಣದ ಚಾಲುಕ್ಯರ ಅವಧಿಯವೆಂದು ಅಂದರೆ ೧೨ ಶತಮಾನವೆಂದು ಹೇಳಬಹುದು. ಹನಸಿ ಗ್ರಾಮದ ಕಲ್ಲೇಶ್ವರ ಗುಡಿಯ ಹೊರಭಾಗದಲ್ಲಿ ಬೇವಿನ ಮರದ ಕೆಳಗೆ ವೀರಗಲ್ಲು ಇದೆ. ಈ ವೀರಗಲ್ಲು ತುರುಗೋಳ್ ಆಗಿದ್ದು, ಲಿಪಿಗಳು ಅಸ್ಪಷ್ಟವಾಗಿದೆ. ಕೊಂಗವಾಡ ಗ್ರಾಮದಲ್ಲಿ ಆಂಜನೇಯ ದೇವಾಲಯದ ಮುಂಭಾಗದಲ್ಲಿ ವೀರಗಲ್ಲಿನ ತುಣುಕು ಕಂಡುಬರುತ್ತದೆ. (ಎಫ್.ಟಿ.ಹಳ್ಳಿಕೆರಿ ೨೦೦೭, ಪುಟ ೭) ಅರೆಹಟ್ಟಿ ಗ್ರಾಮದ ಕಲ್ಲಪ್ಪನ ಗುಡಿ ಮುಂದೆ ವೀರಗಲ್ಲಿನ, ತುಂಡು ಬಿದ್ದಿದೆ. ಇದು ಕಲ್ಯಾಣದ ಚಾಲುಕ್ಯರ ಕಾಲದ ಶೈಲಿಯಲ್ಲಿದೆ. ಹಾಳ್‌ಕುಸುಗಲ್ಲ ಗ್ರಾಮದ ನೆಟಗಲ್ಲಪ್ಪ ಎಂಬ ವೀರಗಲ್ಲು (ಇದು ಮಹದೇವಪ್ಪ, ಮಲ್ಲಪ್ಪ ಹೊಳೆಗಾರ್ ಅವರ ಮನೆಯ ಮುಂದಿನ ಶಾಸನ) ವೀರನೊಬ್ಬ ಹೋರಾಟಕ್ಕೆ ಸಜ್ಜಾದಾನ್ನು ತಿಳಿಸುತ್ತದೆ. ಇದು ಚಾಲುಕ್ಯರ ಕಾಲಕ್ಕೆ ಸೇರಿದದ್ದಾಗಿದೆ. ಇದೇ ಗ್ರಾಮದಲ್ಲಿ ಹನುಮಂತ ದೇವಾಲಯದ ಮುಂಭಾಗದಲ್ಲಿ ನೀರಿನ ಹೊಂಡದಲ್ಲಿದ್ದು  ವೀರನೊಬ್ಬ ಹೋರಾಡಿದ್ದನ್ನು ದಾಖಲಿಸಿದೆ. ಶಲವಡ ಗ್ರಾಮದಲ್ಲಿ ರಾಮೇಶ್ವರ ದೇವಾಲಯ ಹೊರಭಾಗದಲ್ಲಿ ವೀರಗಲ್ಲು ಶಿಲ್ಪಾವಶೇಷಗಳು ಇವೆ. ಬೆಳವಟಗಿ ಗ್ರಾಮದಲ್ಲಿ ದೇವಾಲಯ ಜೀರ್ಣೋದ್ಧಾರವಾಗಿದ್ದು, ಇದರ ಮುಂಭಾಗದಲ್ಲಿ ವೀರಗಲ್ಲು ಕಂಡುಬಂದಿದ್ದು ಇದು ತುರಗೋಳ್ ವೀರಗಲ್ಲಾಗಿದೆ. ಕ್ರಿ.ಶ. ೧೮೯೩ ರ ಜಾವೂರ ಗ್ರಾಮದಲ್ಲಿ ಊರಿನ ಶಾಲಾ ಮೈಧಾನದ ಮುಂಭಾಗದಲ್ಲಿ ವೀರಗಲ್ಲಿನ ತುಣುಕು ಇದೆ. (ಸಿ.ಮಹಾದೇವ ೨೦೦೬, ಪುಟ ೧೪೫) ಒಟ್ಟಾರೆ ಶಾಸನಗಳ  ಲಭ್ಯವಾದ ಮಾಹಿತಿಯನ್ನು ಆಧರಿಸಿ ನೋಡಿದರೆ ವೀರಗಲ್ಲುಗಳ ಶಾಸನಗಳಲ್ಲೂ ವೈವಿಧ್ಯತೆಯನ್ನು ನೋಡಬಹುದಾಗಿದೆ.

### ೨.೩. ಮಾಸ್ತಿಗಲ್ಲು ಶಾಸನಗಳು

'ಮಾಸ್ತಿ' ಎಂಬುದು ಸಂಸ್ಕೃತದ ಮಹಾಸತಿ ಎಂಬುದರ ಸಂಕ್ಷಿಪ್ತರೂಪ. ಗಂಡ ಸತ್ತ ಮೇಲೆ ಅವನ ಜೊತೆ ಪ್ರಾಣತ್ಯಾಗ ಮಾಡುವ ಸ್ತ್ರೀಯನ್ನು ಮಹಾಸತಿ ಅಥವಾ ಮಾಸ್ತಿ ಎಂದು ಕರೆಯುತ್ತಿದ್ದರು. ಸತಿ ಹೋದವಳಿಗೆ ಸಮಾಜದಲ್ಲಿ ಹೆಚ್ಚಿನ ಗೌರವವಿರಲಿಲ್ಲ. ಕಾರಣ ಅನಿವಾರ್ಯವಾಗಿ ಗಂಡ ಸತ್ತ ಮೇಲೆ ಆತನ ಜೊತೆ ಪ್ರಾಣತ್ಯಾಗ ಮಾಡುವ ಪದ್ಧತಿ ಇತ್ತು. ಮಡಿದ ಗಂಡನೊಂದಿಗೆ ಚಿತೆಯನ್ನು ಪ್ರವೇಶ ಮಾಡುವುದನ್ನು ಸಹಗಮನ ಎಂಬುದಾಗಿ ಕರೆಯುತ್ತಾರೆ. 'ಸತಿ' ಹೋಗುವುದು ಎಂಬುದಾಗಿ ಕೆಲವೊಮ್ಮೆ ಕರೆಯುತ್ತಾರೆ. ಈ ರೀತಿ ಮಾಡಿ ಮಡಿದ ಮಹಿಳೆಯರ ಸ್ಮಾರಕಗಳೇ ಮಹಾಸತಿಗಲ್ಲುಗಳು. ಇವುಗಳನ್ನು 'ಮಾಸ್ತಿಗಲ್ಲು' ಮೂಸ್ತಮ್ಮ 'ವ್ಯಾಸನ ತೋಳು' ಎಂಬುದಾಗಿ ಜನ ಹಲವಾರು ಕಡೆ ಇಂದಿಗೂ ಕರೆಯುತ್ತಾರೆ. ಸಹಗಮನ ಮಾಡುವ ಪದ್ಧತಿ ಅಂದು ಪ್ರಚಲಿತವಿದ್ದು ಒಂದು ಸಂಪ್ರದಾಯ. ಹೆಂಗಸು ತನ್ನ ಪಾತಿವ್ರತ್ಯದ ತುತ್ತತುದಿ ಏರಿದಾಗ ಅದು ಎಲ್ಲರಿಂದಲೂ ಸಾಧ್ಯವಿಲ್ಲ.

ಎಂಬುದನ್ನು ಅರಿತಿದ್ದ ನಮ್ಮ ಜನವಸತಿಯಾದವಳ ಬಗ್ಗೆ ಗೌರವ ಅಷ್ಟೇ ಅಲ್ಲ ಪೂಜ್ಯಭಾವನೆಯನ್ನು ಹೊಂದಿದ್ದರು. ಈ ಪದ್ಧತಿ ಹತ್ತನೆಯ ಶತಮಾನದ ನಂತರ ವ್ಯಾಪಕವಾಗಿ ಹರರಡಿತು. ಈ ಸಂಪ್ರದಾಯದಲ್ಲಿ ಮಹಿಳೆಯರ ಎರಡು ರೀತಿಯಲ್ಲಿ ಸತಿ ಹೋಗುತಿದ್ದುದಾಗಿ ತಿಳಿಯುತ್ತದೆ. (ಆರ್.ಶೇಷಶಾಸ್ತ್ರಿ ೨೦೦೫, ಪುಟ ೨೯) ಪತಿಯು ಮಡಿದಾಗ ಆತನ ಶವದ ಜೊತೆಯಲ್ಲಿ ಚಿತೆಗೆ ಬಿದ್ದು ಪ್ರಾಣತ್ಯಾಗ ಮಾಡುವುದು ಸಹಗಮನ ಪದ್ಧತಿ. ತನ್ನ ಪತಿ ಮಡಿದ ಸುದ್ದಿಯನ್ನು ಕೇಳಿ ಸ್ವತಃ ಚಿತೆಯನ್ನು ನಿರ್ಮಿಸಿ, ಚಿತಾ ಪ್ರವೇಶ ಮಾಡುವುದು ಅನುಗಮನ ಪದ್ಧತಿಯಾಗಿದೆ. ಒಟ್ಟಾರೆ ಅಗ್ನಿ ಪ್ರವೇಶವನ್ನು ಮಾಡಿ ತ್ಯಾಗವನ್ನು ನಿರೂಪಿಸಿದ ಮಹಿಳೆಯರ ಈ ಸ್ಮಾರಕಗಳೇ ಮಹಾಸತಿಗಲ್ಲುಗಳು. ವೀರಗಲ್ಲುಗಳಂತೆ ಮಹಾಸತಿಗಲ್ಲುಗಳಲ್ಲೂ ಮೂರು ನಾಲ್ಕು ಚಿತ್ರಗಳಿರುತ್ತವೆ. ಬರಿಯ ಸ್ತ್ರೀ ವೀಗ್ರಹವೂ ಇರಬಹುದು. ಅಂದು ಸಹಗಮನವನ್ನು ಬಲವಂತವಾಗಿ ಮಾಡಿಸಲಾಗುತ್ತಿತ್ತು. ಎಂಬುದಕ್ಕೆ ಕರ್ನಾಟಕದ ಮಟ್ಟಿಗೆ ಎಲ್ಲಿಯೂ ನಿದರ್ಶನಗಳು ದೊರೆಯುವುದಿಲ್ಲ. ಸಹಗಮನ ಮಾಡುವುದು ಬಿಡುವುದು ಹೆಂಗಸಿನ ವೈಯಕ್ತಿಕ ಪ್ರಶ್ನೆಯಾಗಿತ್ತು. ಅನೇಕ ಮಹಿಳೆಯರು ಯುದ್ಧದಲ್ಲಿ ಮಡಿದ ತಮ್ಮ ಗಂಡಂದಿರಿಗೆ ವೀರಗಲ್ಲುಗಳನ್ನು ನಿಲ್ಲಿಸಿರುವ ನಿದರ್ಶನಗಳು ದೊರೆಯುತ್ತವೆ. ಕೆಲವು ಮಹಾಸತಿಗಳ ಮೇಲೆ ಒಂದು ಕಂಬ ಮತ್ತು ಅದರ ಬಲಭಾಗದಿಂದ ಹೊರಟಿರುವ ಒಂದು ಕೈ ಇರುತ್ತದೆ. ಇದು ಒಕ್ಕೈ ಮಾಸ್ತಿಕಲ್ಲು ಎರಡು ಕೈಗಳು ಹೊರಟಿದ್ದರೆ ಇಕ್ಕೈಯಿ ಮಾಸ್ತಿಗಲ್ಲು ಎಂದು ಹೆಸರಿಸುತ್ತಾರೆ. ಕೆಲವೊಮ್ಮೆ ಮಹಾಸತಿಯ ಕೈಯಲ್ಲಿ ನಿಂಬೆಹಣ್ಣು ತಲೆಹಿಂದೆ ಪ್ರಬಾವಳಿಯಂತೆ ಕಾಣುವ ಜ್ವಾಲೆ ಇರುತ್ತದೆ. ಕೆಲವೊಮ್ಮೆ ಮಹಾಸತಿಯನ್ನು ವೀರೊಡೊಡನೆ ಒಬ್ಬರಿಗಿಂತ ಹೆಚ್ಚು ಸ್ತ್ರೀಯರು ಸಹಗಮನ ಮಾಡಿದ್ದರೆ ಅಷ್ಟುಜನ ಸ್ತ್ರೀ ತನ್ನ ಪತಿಯ ಬಲಗಡೆನಿಂತು ಎಡಗೈಯನ್ನು ಎತ್ತಿಸಿರುವ ಚಿತ್ರ, ಒಟ್ಟಾರೆ ಮೌಲ್ಯಗಳಿಗೆ ಪಣತೊಟ್ಟು ಬದ್ದರಾಗಿದ್ದಾರೆಂಬುದನ್ನು ಇದು ಪ್ರತಿಬಿಂಬಿಸುತ್ತವೆ.

ನವಲಗುಂದ ತಾಲೂಕಿನ ಇಂತಹ ಮಹಾಸಿತಿಗಲ್ಲುಗಳನ್ನು ಇಲ್ಲಿ ದೊರೆತಿರುವ ಮಹಾಸತಿಗಲ್ಲುಗಳಲ್ಲಿ ಗುಡಿಸಾಗರ ಗ್ರಾಮದಲ್ಲಿ ಹನುಮಂತದೇವರಗುಡಿ ಮುಂಭಾಗದಲ್ಲಿ ಇಂತಹ ವೀರ ಮಹಾಸತಿಗಲ್ಲುಗಳನ್ನು ಕಾಣಬಹುದು. ನಾವಳ್ಳಿ ಗ್ರಾಮದ ಕಲ್ಲೇಶ್ವರ ಗುಡಿಯ ದಕ್ಷಿಣಕ್ಕಿರುವ ಒಂದು ವೀರಗಲ್ಲುಸತ್ತ ವೀರ ಮತ್ತು ಅವನ ಸತಿ ಇಬ್ಬರ ಚಿತ್ರಣವೂ ಇದ್ದು, ಮೇಲ್ಬಾಗದಲ್ಲಿ ಸ್ವರ್ಗಸ್ಥರಾದಂತೆಯೂ ಚಿತ್ರಿಸಲಾಗಿದೆ. ಇದರಿಂದ ಇದು ವೀರ ಮಾಸ್ತಿಕಲ್ಲೆಂದು ಹೇಳಲಾಗಿದೆ.

### ೨.೪. ನಿಷಿಧಿಗಲ್ಲು ಶಾಸನಗಳು

ಜೈನ ಧರ್ಮದಲ್ಲಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ ದೇಹವನ್ನು ತ್ಯಾಗ ಮಾಡಿದವರ ಬಗ್ಗೆ, ಈಗಾಗಲೇ ಸಾಕಷ್ಟು ಪ್ರಸ್ತಾಪವಾಗಿದೆ. ಪ್ರಸ್ತುತ ಕ್ರಿ.ಶ. ೧೨, ೧೩ ನೆಯ ಶತಮಾನದ ನಿಷಧಿಗಲ್ಲವು ಕಪ್ಪುಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಇದು ೪೮ ಸೆಂ.ಮೀ. ಉತ್ತರ ಮತ್ತು ೩೨ ಸೆಂ.ಮೀ. ಅಗಲವಾಗಿದ್ದು ಎರಡು ಶಿಲ್ಪಪಟ್ಟಿಕೆಗಳಿಂದ ಕೂಡಿದೆ. ಕೆಳಗಿನ ಪಟ್ಟಿಕೆಯಲ್ಲಿ ಸಲ್ಲೇಖನವ್ರತವನ್ನು ಧರಿಸಿ ದೇಹತ್ಯಾಗ ಮಾಡಿದ ಮುನಿ ಆಸೀನನಾಗಿರುವ ಮಂಟಪವಿದ್ದು, ಇದರ ಇಕ್ಕೆಲಗಳಲ್ಲಿ ಇಬ್ಬರು ದ್ವಿಭುಜ ಪಾಮರಧಾರಿಣಿಯರಿದ್ದಾರೆ ಇವರು ಕಿರೀಟ ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕೈಗಡಗ, ಕಟಿವಸ್ತ್ರ, ಕಾಲ್ಗಡಗಕ ಮೊದಲಾದ ವಸ್ತ್ರಾಭರಣಗಳನ್ನು

ಧರಿಸಿದ್ದಾರೆ. ಮೇಲಿನ ಪಟ್ಟಿಕೆಯಲ್ಲಿ ಸಿಂಹಪೀಠದ ಮೇಲೆ ಪರ್ಯಾಂಕಾಸನದಲ್ಲಿರುವ ತೀರ್ಥಂಕರ, ವೀರಸನದಲ್ಲಿ ಆಸೀನನಾಗಿ ವ್ರತವನ್ನು ಭೋಧಿಸುತ್ತಿರುವ ಮುನಿ ಮತ್ತು ಪರ್ಯಂಕಾಸನದಲ್ಲಿ ಅಂಜಲಿ ಮುದ್ರಾಸಕ್ತರಾಗಿ ವ್ರತವನ್ನು ಆಲಿಸುತ್ತಿರುವ ವ್ರತಧಾರಿಗಳ ಉಬ್ಬುಶಿಲ್ಪಗಳಿವೆ. ಇಲ್ಲಿ ಅಂತಹವರ ಸ್ಮಾರಕ ಶಿಲೆಗಳ ಶಿಲ್ಪವನ್ನು ಪರಿಚಯ ಮಾಡಿ ಕೊಡುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ. ಇಂಥ ಸ್ಮಾರಕಗಳನ್ನು ನಿಷಿಧಿಕಲ್ಲುಗಳೆಂದು ಕರೆಯುತ್ತಾರೆ. (ಆರ್. ಶೇಷಾಶಾಸ್ತ್ರಿ ೨೦೦೫, ಪುಟ ೬೦) ನಿಷಿಧಿಗಲ್ಲುಗಳು, ಸನ್ಯಾಸದ ವಿಧಿಯಿಂದ ಮಾಡಿದವರ ಸ್ಮರಣಾರ್ಥವಾಗಿ ನಿಲ್ಲಿಸಿಲ್ಪಟ್ಟಿವೆ. ಬದುಕಿನಲ್ಲಿ ನಿರಂತವಾಗಿ, ಧರ್ಮವನ್ನು ಆಚರಿಸಿ ಸಾಯುವಾಗಲೂ ಇದೇ ಭಾವನೆಯಲ್ಲಿ ಸತ್ತರೆ ಮೋಕ್ಷವನ್ನು ಹೊಂದುತ್ತಾರೆಂದು ಜೈನ ಧರ್ಮದಲ್ಲಿ ಹೇಳಿದೆ. ಶ್ರಾವಕನು ತನ್ನ ಅತಿಮ ಕಾಲದಲ್ಲಿ ಈ ಮತದ ಶೇಷ್ಠ ವ್ರತವಾದ ಸಲ್ಲೇಖನಾ ವ್ರತವನ್ನು ಆಚರಿಸಿ ಜಿನಧಾನ್ಯದಲ್ಲಿ ನಿರಂತರವಾಗಿ ದೇಹತ್ಯಾಗ ಮಾಡಿ ಮೋಕ್ಷವನ್ನು ಗಳಿಸುತ್ತಾನೆ. ಹೀಗೆ ಮೋಕ್ಷವನ್ನು ಸಾಧಿಸಿದ ಶೇಷ್ಠ ಸಾಧಕರ ಸ್ಮಾರಕವೇ ನಿಷಧಿಗಲ್ಲು (ಕೆ.ಶಿವಲೀಲ ೨೦೦೩, ಪುಟ ೪೧) ಸಂಸ್ಕೃತದಲ್ಲಿ 'ನಿಷೇಧಿಕಾ ಪ್ರಾಕೃತದಲ್ಲಿ' ನಿಸಿಹಿಯೊ ಕರ್ನಾಟಕದಲ್ಲಿ ಅದರಲ್ಲೂ ಹೆಚ್ಚಾಗಿ ಉತ್ತರ ಕರ್ನಾಟಕದಲ್ಲಿ 'ನಿಷಧಿ' ಎಂಬ ಹೆಸರಿನಿಂದಲೂ ಕರೆಯುತ್ತಾರೆ. (ಚಿದಾನಂದಮೂರ್ತಿ ೧೯೭೯, ಪುಟ ೯೮) ನಿಷಿಧಿಗಲ್ಲು ಸನ್ಯಾಸ ಸ್ವೀಕರಿಸಿದ ವ್ಯಕ್ತಿಯನ್ನು ಹೆಸರಿಸುತ್ತದೆ. ನಿಷಧಿಗಲ್ಲುಗಳ ಇರುವ ಸ್ಥಳ ತೀರ್ಥ ಪುಣ್ಯಕ್ಷೇತ್ರಗಳಂತೆ ಪವಿತ್ರ ತಾಣ. ನವಲಗುಂದ ತಾಲೂಕಿನಲ್ಲಿ ಮೊರಬ ಗ್ರಾಮದ ಹನುಮಂತ ದೇವರಗುಡಿ ಹತ್ತಿರ S.I.I. xv 53 ನಾಗಚಂದ್ರ ದೇವರ ನಿಷಧಿ ಹಾಗೂ ಭದ್ರಾಪುರ ನಿಷಧಿಗಲ್ಲು ಮತ್ತು ನಿಷೇಧಿ ಶಾಸನ ದೊರಕಿದೆ. ಈ ಶಾಸನ ವಿಠ್ಠಲಸಾಮಿ ಮಠದ ಹತ್ತಿರುವ ನಿಷಧಿಗಲ್ಲು ಮತ್ತು ಜೈನಾವಶೇಷಗಳ ಕುರಿತು ಚರ್ಚಿಸುವುದು ಶಾಸನದ ಉದ್ದೇಶವಾಗಿ ಕಂಡುಬಂದಿದೆ. (ಎಂ.ವಿ.ಜಯಚಂದ್ರ ಪುಟ ೭೦)

**೩. ನವಲಗುಂದ ತಾಲೂಕಿನ ವೈವಿದ್ಯ ಶಾಸನಗಳ ಸಾರಾಂಶಗಳು**

ನವಲಗುಂದ ತಾಲೂಕಿನಲ್ಲಿ ೭೧ ಶಾಸನಗಳು ಅಭ್ಯವಾಗಿವೆ. ಇವುಗಳು ಸಮಕಾಲೀನ ರಾಜಕೀಯ ಆಡಳಿತ ಧಾರ್ಮಿಕ ಸಾಮಾಜಿಕ ದೇವಾಲಯಗಳು ನಿರ್ಮಾಣ, ಶಿಲ್ಪಗಳ ಪ್ರತಿಷ್ಠಾಪನೆ ಭೂದಾನ ವೀರಮರಣ ಮಾಸ್ತಿಮರಣ, ಗೋಸಾಸ, ವ್ಯಕ್ತಿಗ್ರಾಮಗಳ ಹೆಸರುಗಳು ಮೊದಲಾದ ವಿಷಯ ವಿಷಯವನ್ನೊಳಗೊಂಡಿವೆ. ಈ ಎಲ್ಲ ಶಾಸನಗಳ ಸಾರಾಂಶಗಳು ಮತ್ತು ಅವುಗಳಿಂದ ಲಭ್ಯವಿರುವ ವಿವರಣೆಗಳನ್ನು ಮಹತ್ವವನ್ನು ಈ ಕೆಳಗೆ ನೀಡಲಾಗಿದೆ.

ಶಾಸನದ ಸಂಖ್ಯೆ : ೧

ಗ್ರಾಮ : ಶಿರೂರು

ಸ್ಥಳ : ಹೂರಡೆ ಹತ್ತಿರ ಚಾವಡಿ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೮೬೬

ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ ೧೯೭೫ ಪು

ಶಿರೂರು ಕವಿಯನ್ನು ಮತ್ತು ಇನ್ನೂರು ಜನರಿಗೆ ಬೆಳ್ವೂಲ ಮೂನ್ನೂರರ ಅಧಿಕಾರಿ ದೇವಮಯ್ಯನು ಕೆರೆಯನ್ನು ಮಾಡಿದನು. ಲಿಪಿಕಾರ ನಾಗಾರ್ಜುನ ಕವಿ, ಸಿಂಗಾಣಯ್ಯನ ಕುರಿತು ಈ ಶಾಸನ ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೨

ಗ್ರಾಮ : ಶಿಶುವಿನಹಳ್ಳಿ | ಸ್ಥಳ : ಹನುಮಂತ ದೇವರಗುಡಿ

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೮೭೨

ವರದಿ/ಪ್ರಕಟಣೆ : (S.I.I.xi-i14, B.K. No. 246 of 1928-29)

ಈ ಶಾಸನ ಬೆಳ್ವಲ ಮೂನ್ನೂರರ ಅಧಿಕಾರಿ ದೇವಣಯ್ಯನು ಸಿಸುಹಾಳದ ಬ್ರಾಹ್ಮಣರಿಗೆ ತುಪ್ಪದ ಮೇಲಿನ ಸುಂಕ ವಿನಾಯಿತಿ ಮಾಡಿದ ಉಲ್ಲೇಖವಿದೆ.

ಶಾಸನದ ಸಂಖ್ಯೆ : ೩

ಗ್ರಾಮ : ಕುರಹಟ್ಟಿ | ಸ್ಥಳ : ಹನುಮಂತ ದೇವಾಲಯದ ಸಮೀಪಕದಲ್ಲಿ ಬಿಟ್ಟ ತ್ರುಟಿತ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೦ ನೇ ಶತಮಾನ

ವರದಿ/ಪ್ರಕಟಣೆ : (S.I.I.viii, 32, B.K. No. 193 of 1132-33)

ಲಿಪಿ ದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೦ನೇ ಶತಮಾನ. ಈ ತೃಟಿತ ಶಾಸನ ದೇವಾಲಯವನ್ನು ಕಟ್ಟಿದ ಮತ್ತು ದೇವಾಲಯಕ್ಕೆ ದಾನಮಾಡಿದ ವಿವರ ನೀಡುತ್ತದೆ.

ಶಾಸನದ ಸಂಖ್ಯೆ : ೪

ಗ್ರಾಮ : ಮೊರಬ | ಸ್ಥಳ : ಹನುಮಂತ ದೇವರಗುಡಿ ಕಲ್ಲಿನಲ್ಲಿ ನಿಷಧಿ

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೦೫೯

ವರದಿ/ಪ್ರಕಟಣೆ : (S.I.I.xv, 530, B.K. No. 239 of 1928-29)

ಈ ಶಾಸನ ಜೈನ ಯತಿಯ ನಿಷಧಿಯನ್ನು ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೫

ಗ್ರಾಮ : ಅಣ್ಣಿಗೇರಿ | ಸ್ಥಳ : ಪುರದ ವೀರಪ್ಪನಗುಡಿ ಎದುರ

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೦೭೫,೭೬

ವರದಿ/ಪ್ರಕಟಣೆ : (S.I.I.xi-I 1No. 115, B.K. No.108 of 1928-29)

ಈ ಶಾಸನ ಹೆಚ್ಚಿನ ಭಾಗ ಹಾಳಾಗಿದೆ. ಈ ಶಾಸನದ ಕಾಲ. ಶಕ ೯೯೬ ರಾಕ್ಷಸ ಶು........ ಇದು ಕ್ರಿ.ಶ. ೧೦೭೫ ೭೬ ಕ್ಕೆ ಸಮವಾಗುತ್ತದೆ. ಇದು ಭುವನೇಕಮಲ್ಲ ದೇವನ ೨ ನೇ ಸೋಮೇಶ್ವರನ ಕಾಲಕ್ಕೆ ಸೇರಿದೆ. ಈ ಶಾಸನ ಬೆಳವಳ ದೇಶ ಮತ್ತು ರಾಜಧಾನಿ ಅಣ್ಣಿಗೇರಿ ಮತ್ತು ಮಾಸವಾರಡಿ ಸಮೀಪದ ಆಗ್ರಹಾರವನ್ನು ದಾಖಲಿಸುತ್ತದೆ.

ಶಾಸನದ ಸಂಖ್ಯೆ : ೬

ಗ್ರಾಮ : ಮೊರಬ
ಸ್ಥಳ : ಕಲ್ಮೇಶ್ವರ ದೇವಾಲಯ ಎದುರಿನಲ್ಲಿದೆ.
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೦೭೭
ವರದಿ/ಪ್ರಕಟಣೆ : (S.I.I.xi-ii 1244, B.K. No. 237 of 1928-29)

ಈ ಶಾಸನ ಜಯಸಿಂಗದೇವ ಯಜಮಾನನಾಗಿ ಕುಂದೂರ ೧೦೦೦, ಪುಲಿಗೆರೆ ೩೦೦, ಬೆಳ್ವಲ ೩೦೦, ಆಳುವಾಗ ನೊಭಂಬ ಸಮುದ್ರ ಕೆರೆಗೆ ಬಿಟ್ಟ ಭೂದಾನವನ್ನು ಉಲ್ಲೇಖಿಸುತ್ತವೆ.

ಶಾಸನದ ಸಂಖ್ಯೆ : ೭

ಗ್ರಾಮ : ಬೆಳವಟಗಿ
ಸ್ಥಳ : ರಾಮಲಿಂಗ ದೇವಾಲಯಮುಂದೆ ಇರುವ ಕಲ್ಲಿನಲ್ಲಿ
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೯೯೩
ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ ೧೯೭೫ ಪು. ೨೨

ಈ ಶಾಸನ ಬೈರುಂಬರ ಮಲ್ಲಮಯ್ಯನು ಬಳ್ಳವಟ್ಟಿಗೆಯಲ್ಲಿ ಭೈರುಂಭೇಶ್ವರ ದೇವಾಲಯ ಕಟ್ಟಿಸಿ ನೀಡಿದ ಭೂದಾನ ಉಲ್ಲೇಖಿಸುತ್ತದೆ. ಇದರಿಂದ ಮೇಲಿನ ರಾಮಲಿಂಗೇಶ್ವರ ಗುಡಿಯ ಪ್ರಾಚೀನ ಹೆಸರು ಭೈರುಂಬೇಶ್ವರ ಎಂದು ತಿಳಿದುಬರುವುದು. ಬೆಳವಟಿಗೆಯ ಮೂಲ ಹೆಸರು ಬೆಳ್ಳವಟ್ಟಿಗೆ ಎಂದಿದೆ.

ಶಾಸನದ ಸಂಖ್ಯೆ : ೮

ಗ್ರಾಮ : ಅಣ್ಣಿಗೇರಿ
ಸ್ಥಳ : ಮೈಲಾರಪ್ಪನ ಗುಡಿ ಎದುರು
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೯೯೭
ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ ೧೯೭೫ ಪು. ೨೨

ಈ ಶಾಸನ ಚಾಲುಕ್ಯ ತ್ರಿಭುವನಮಲ್ಲ ೬ ನೆಯ ವಿಕ್ರಮಾದಿತ್ಯನ ಶಾಸನವು ಆತ್ರೇಯ ಗೋತ್ರದ ಮಹಾಮಾತ್ಯ, ರಾಜಾಧ್ಯಕ್ಷ ಬಲದೇವಯ್ಯನಾಯಕನು ಕೆಲವು ಹಣವನ್ನು ಶ್ರಾಮಣಮಾಸದ ಪೌರ್ಣಿಮೆಯ ದಿನ ಬ್ರಾಹ್ಮಣರ ದಕ್ಷಿಣೆಗೆ ವಿನಿಯೋಗಿಸುವುದಕ್ಕಾಗಿ ಕೊಟ್ಟಿದ್ದಾನೆಂದು ತಿಳಿಸುವುದು.

ಶಾಸನದ ಸಂಖ್ಯೆ : ೯

ಗ್ರಾಮ : ಬ್ಯಾಲ್ಹಾಳ
ಸ್ಥಳ : ಕಲ್ಮೇಶ್ವರ ದೇವಾಲಯದಲ್ಲಿ ಇಟ್ಟ ಕಲ್ಲಿನ ಮೇಲೆ
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೧೦೨,೦೩
ವರದಿ/ಪ್ರಕಟಣೆ : (S.I.I.xi-II,. 185, B.K. No. 221 of 1928-29)

ಈ ಶಾಸನ ಹೆಚ್ಚಿನ ಭಾಗ ಹಾಳಾಗಿದೆ. ಈ ಶಾಸನದ ಕಾಲ ವಿಕ್ರಮಾ ವರ್ಷ ೨೭, ಚಿತ್ರ (ಭಾನು) ಇದು ಕ್ರಿ.ಶ. ೧೧೦೨, ೦೩ ಕ್ಕೆ ಸಮವಾಗುತ್ತದೆ. ಉಳಿದ ವಿವರ ಅಸ್ಪಷ್ಟವಾಗಿದೆ.

ಶಾಸನದ ಸಂಖ್ಯೆ : ೧೦

ಗ್ರಾಮ : ಮೊರಬ

ಸ್ಥಳ : ಹನುಮಂತ ದೇವಾಲಯದಲ್ಲಿ ಇಟ್ಟಿಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧೦೩

ವರದಿ/ಪ್ರಕಟಣೆ : (S.I.I, xi, II 186, B.K No. 2380f 1928-29)

ಶಾಸನ ಹಾಳಾಗಿದೆ. ಶಾಸನದ ಕಾಲ ಚಾಲುಕ್ಯ ವಿಕ್ರಮ ವರ್ಷ ೨೮, ಸುಭಾನು, ದೀಪಾಳಿ, ಅಮಾವಾಸೆ, ಆದಿತ್ಯವಾರ ಇದು ಕ್ರಿ.ಶ. ೧೧೦೩ ಅಕ್ಟೋಬರ್ ೩ ಕ್ಕೆ ಸಮವಾಗುತ್ತದೆ. ಮಲ್ಲಿಕಾರ್ಜುನ ಪಂಡಿತ, ಶಾನಬೋವ, ನಾಗದೇವಣ್ಣ ಮತ್ತು ಸೇನಬೋವ ಅಪ್ಪಣ್ಣಯ್ಯನ ಹೆಸರನ್ನು ಶಾಸನ ತಿಳಿಸುತ್ತದೆ.

ಶಾಸನದ ಸಂಖ್ಯೆ : ೧೧

ಗ್ರಾಮ : ನಾವಳ್ಳಿ

ಸ್ಥಳ : ಕಲ್ಮೇಶ್ವರ ದೇವಾಲಯ ಎದುರು

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧೨೧

ವರದಿ/ಪ್ರಕಟಣೆ : ಡಾ.ಎಫ್.ಟಿ. ಹಳ್ಳಿಕೇರಿ, ೨೦೦೭, ಪು. ೧

ಈ ಶಾಸನ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾಧಿತ್ಯ ತ್ರಿಭುವನಮಲ್ಲನ ಕೇಂದ್ರಿಯ ಸೈನ್ಯದ ದಂಡನಾಯಕ, ಸಾಯಿಡಯ್ಯ ಮತ್ತು ಸೈನ್ಯದ ದಂಡನಾಯಕ ಕೇಶವಚಮಾಪ ಮೊದಲಾದ ಪ್ರಮುಖ ಕರಣಂಗಳು, ಬಲ್ಲರಸನ ಭಿನ್ನಹದ ಮೇರೆಗೆ ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದ ೪೬ ನೆಯ ಪ್ಲವಸಂವತ್ಸರ ಚೈತ್ರದ ಪುಣ್ಣಮಿ ಸೋಮವಾರ ಸೋಮಗ್ರಹಣ...... ದಂದು ಅಂದರೆ ಕ್ರಿ.ಶ. ೧೧೨೧ ನೆಯ ಏಪ್ರೀಲ್ ೪ ಸೋಮವಾರದಂದು ಅಗ್ರಹಾರ ನಾವಳ್ಳಿಯ ಶ್ರೀ ಸ್ವಯಂಭು ಕಲಿದೇವ ಕಲ್ಮೇಶ್ವರ ಸ್ವಾಮಿ ದೇವಾಲಯಕ್ಕೆ ಬೇಟಿ ನೀಡಿ ಭಕ್ತಿಯಿಂದ ಪೂಜೆ ಸಲ್ಲಿಸಿ ಅಭಿಷ್ಟಾರ್ಥ ಸಿದ್ದಿಯನ್ನು ಪಡೆದುಕೊಳ್ಳುತ್ತಾನೆ. ಆ ಸಂದರ್ಭದಲ್ಲಿಯೇ ಕಲ್ಮೇಶ್ವರ ಸ್ವಾಮಿಯ ಅಂಗಭೋಗಕ್ಕೆ ದೇವಾಲಯದ ಜೀರ್ಣೋದ್ದಾರಕ್ಕೆ, ಬಾಲಶಿಕ್ಷೆ ಪ್ರಾಥಮಿಕ ಶಿಕ್ಷಣ ವಿದ್ಯಾರ್ಥಿ ವೇತನಕ್ಕಾಗಿ ಆ ಗ್ರಾಮದ ಉತ್ಪನ್ನವನ್ನು ಪರಮೇಶ್ವರ ದತ್ತಿಯಾಗಿ ಬಿಟ್ಟ ವಿಷಯವನ್ನು ಈ ಶಾಸನ ವಿವರಿಸುತ್ತದೆ. ಹೀಗೆ ಈ ಶಾಸನದಿಂದಾಗಿ ನಾವಳ್ಳಿ ಗ್ರಾಮವು ಅಂದಾಜು ೯೦೦, ವರ್ಷಗಳಷ್ಟು ಪ್ರಾಚೀನವಾದುದೆಂಬುದು ಸ್ಪಷ್ಟವಾಗುತ್ತದೆ.

ಶಾಸನದ ಸಂಖ್ಯೆ : ೧೨

ಗ್ರಾಮ : ಕುರುಹಟ್ಟಿ

ಸ್ಥಳ : ಹನುಮಂತ ದೇವಾಲಯದಲ್ಲಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧೪೨

ವರದಿ/ಪ್ರಕಟಣೆ : (S.I.I, xv, 22, B.K No. 233 of 1928-29)

ಈ ಶಾಸನ ಮಹಾ ಪ್ರಧಾನ ಕಡಿತವೆಗ್ಗಡೆ ಮಾಳಪಯ್ಯನಾಯಕನಿಂದ ತ್ರಿಕೂಟೇಶ್ವರ ದೇವಾಲಯ ನಿರ್ಮಾಣ ಮತ್ತು ದಾನವನ್ನು ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೧೩

ಗ್ರಾಮ : ಭದ್ರಾಪುರ

ಸ್ಥಳ : ದ್ಯಾಮವ್ವ ದೇವಾಲಯದಲ್ಲಿ ಮುಂಭಾಗದಲ್ಲಿದೆ. ನಿಷಧಿಗಲ್ಲು

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨೪೮

ವರದಿ/ಪ್ರಕಟಣೆ : ಅಪ್ಪಣ್ಣ ಎನ್.ಹಂಜೆ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ. ೮೪, ಸಂ. ೦೩, ಜು. ಸೆ. ೨೦೦೬

ಈ ಶಾಸನ ಸಂವತ್ಸರದ ವೈಶಾಖ ಬಹಳ ಪಡಿ ಬುಧವಾರದಂದು ಕ್ರಿ.ಶ. ೧೨೪೮ ಶ್ರೀ ಮೂಲ ಸಂಘದ ಸೇನಗಣದ ರತ್ನ ಸೇನಸಿದ್ಧಾಂತದೇವ ಮುನಿಗಳು ಮೋಕ್ಷಕ್ಕೆ ಸಂದರು. ಮೇಲಾಗದಲ್ಲಿ ಸೂರ್ಯ ಮತ್ತು ನಿಷಧಿಗಲ್ಲಿನ ಕಾಲಮಾನ ಒಂದೇ ಆಗಿರುವುದರಿಂದ ಪ್ರಾಯಶಃ ಈ ಮೇಲಿನ ರತ್ನಸೇನ ಸಿದ್ಧಾಂತದೇವ ಮುನಿಗಳು ಸಲ್ಲೇಖನ ವ್ರತದಿಂದ ಸಮಾಧಿ ಮರಣವನ್ನಪ್ಪಿದ ತರುವಾಯ ಶಾಸನವನ್ನು ಮಾತ್ರ ಬರೆಸಿರಬಹುದು. ಕಾಲಾಂತರದಲ್ಲಿ ಅವರ ಪರೋಕ್ಷ ವಿನಯಾರ್ಥವಾಗಿ ಈ ನಿಷಧಿಗಲ್ಲನ್ನು ಮಾಡಿದಂತೆ ತೋರುತ್ತದೆ.

ಶಾಸನದ ಸಂಖ್ಯೆ : ೧೪

ಗ್ರಾಮ : ಅಣ್ಣಿಗೇರಿ

ಸ್ಥಳ : ಹನುಮಂತ ದೇವಾಲಯದಲ್ಲಿ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧೫೭

ವರದಿ/ಪ್ರಕಟಣೆ : (S.I.I, xv, II 66, B.K No. 2380f 1928-29)

ಈ ಶಾಸನ ದೇವಾಲಯದಲ್ಲಿರುವ ಕ್ರಿ.ಶ. ೧೧೫೭ ರ ಬಿಜ್ಜಳನ ಶಾಸನವು ದಂಡನಾಯಕ ಶ್ರೀಧರಯ್ಯನು ಧೋರೇಶ್ವರ ದೇವರ ಜೀರ್ಣೋದ್ಧಾರಕ್ಕೆ ಭೂಧಾನ ಮಾಡಿದನ್ನು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೧೫

ಗ್ರಾಮ : ಅಣ್ಣಿಗೇರಿ

ಸ್ಥಳ : ಅಮೃತೇಶ್ವರ ಗುಡಿ ಪ್ರಕಾರ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧೫೭

ವರದಿ/ಪ್ರಕಟಣೆ : (S.I.I, xv, II 100, B.K No. 201, 0f 1928-29)

ಈ ಶಾಸನ ಕಲಚುರ್ಯಭುಜಬಳ ಚಕ್ರವರ್ತಿ ಬಿಜ್ಜಳದೇವನ ಐದನೇ ವರ್ಷದಲ್ಲಿ ಬರೆಯಲಾದ ಒಂದು ಶಾಸನಗಲ್ಲು ನಿಂತಿದೆ. ಅಮೃತೇಶ್ವರ ದೇವಾಲಯದಲ್ಲಿ ಪುರಾಮವನ್ನು ಹೆಳುವುದರ ಸಲುವಾಗಿ ಮತ್ತು ಪೂಎ ಮಾಡುವುದರ ಸಲುವಾಗಿ ಶ್ರೀಧರ ದಂಡನಾಯಕನು ಕೆಲವು ಬೂಮಿಯನ್ನು ಧಾನವಾಗಿ ಕೊಟ್ಟನೆಂದು ಅದು ತಿಳಿಸುತ್ತದೆ.

ಶಾಸನದ ಸಂಖ್ಯೆ : ೧೬

ಗ್ರಾಮ : ಅಣ್ಣಿಗೇರಿ

ಸ್ಥಳ : ಗುಳ್ಳಿಕೇರಿ ಬಸವಣ್ಣನಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧೬೨

ವರದಿ/ಪ್ರಕಟಣೆ : (S.I.I, xv, II 102, B.K No. 199, 0f 1928-29)

ಈ ಶಾಸನ ಕಲಚುರ್ಯ ಬಿಜ್ಜಳನ ಕಾಲದಲ್ಲಿ ಕ್ರಿ.ಶ. ೧೧೬೨ ರಲ್ಲಿ ಬರೆದ ಒಂದು ಶಾಸನ ನಿಂತಿದೆ. ಪಟ್ಟಮವರ್ಗಡೆಯಾದ ಕೇಶಿರಾಜನ ಭಿನ್ನಹದ ಮೇರೆಗೆ ಬೆಳ್ವಲನಾಡಿನ ಪೆರ್ಗಡೆಯಾದ ದಂಡನಾಯಕ ಶ್ರೀಧರಯ್ಯನ ಅಣ್ಣಿಗೇರಿಯ ಚಂಪಿಕಾ ದೇವಿಯ ಪೂಜೆಗೆ ಮತ್ತು ನೈವೇಧ್ಯಕ್ಕೆ ಭೂಮಿಯನ್ನು ದಾನಮಾಡಿದ್ದಾನೆಂದು ಈ ಶಾಸನದಲ್ಲಿ ಉಲ್ಲೇಖಿಸಿದೆ. ಆ ಕಾಲದಲ್ಲಿ ಅಣ್ಣಿಗೇರಿಯಲ್ಲಿ ಚಂಡಿಕಾ ದೇವಿಯ ಆರಾಧನೆ ನಡೆಯುತ್ತಿತ್ತೆಂದು ಇದರಿಂದ ತಿಳಿಯುವುದು.

ಶಾಸನದ ಸಂಖ್ಯೆ : ೧೭

ಗ್ರಾಮ : ಅಣ್ಣಿಗೇರಿ ಸ್ಥಳ : ಪವಾಡಿ ಬಸವಣ್ಣನ ಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೧೭೩

ವರದಿ/ಪ್ರಕಟಣೆ : (S.I.I, xv, II 122, B.K No. 206, 0f 1928-29)

ಈ ಶಾಸನ ಧನ್ನುಗಿ ದಂಡನಾಯಕನು ಬೆಳ್ವಲದೇಶದ ಅಧಿಕಾರಿಯಾಗಿದ್ದ ಕಾಲಕ್ಕೆ ರಾಜನ ಅಪ್ಪಣೆಯ ಮೇರೆಗೆ ನಾಗಗಾವುಂಡನು ಅಣ್ಣಿಗೇರಿಯಲ್ಲಿ ನಾಗೇಶ್ವರ ದೇವಸ್ಥಾನವನ್ನು ಕಟ್ಟಿಸಿ, ಅದಕ್ಕೆ ಭೂಮಿಯನ್ನು ದಾನವಾಗಿ ಬಿಟ್ಟನೆಂದು ತಿಳಿಯುವುದು. ಈ ದಾನವನ್ನು ಆ ದೇವರ ಪೂಜೆಗೆ ಗುಡಿಯ ಜೀರ್ಣೋದ್ಧಾರಕ್ಕೆ ಮತ್ತು ವಿದ್ಯಾವಿತರಣೆಗಾಗಿ ಕೊಡಲಾಗಿತ್ತು.

ಶಾಸನದ ಸಂಖ್ಯೆ : ೧೮

ಗ್ರಾಮ : ಅಣ್ಣಿಗೇರಿ ಸ್ಥಳ : ಪುರದ ವೀರಪ್ಪನಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೧೦೩

ವರದಿ/ಪ್ರಕಟಣೆ : (S.I.I, xv, II 59, B.K No. 207, 0f 1928-29)

ಈ ಶಾಸನ ಕಲಚುರಿಯ ಕುಲಕ್ಕೆ ಅಗ್ನಿಯಂತಿದ್ದ ವೀರಬಮ್ಮರಸ ದಣ್ಣಾಯಕನು ಗದುಗಿನ ತ್ರಿಕೂಟೇಶ್ವರ ದೇವರಿಗೆ ದತ್ತಿಯನ್ನು ಬಿಡುವ ಕಾಲದಲ್ಲಿ ಅಣ್ಣೀಗೆಜೆಯ ವೀರಬಮ್ಮೇಶ್ವರ ದೇವಸ್ಥಾನದ ಜೀರ್ಣೋದಧಾರಕ್ಕೆ, ಅಲ್ಲ ನಡೆಯುವ ಪೂಜೆಗೆ ಮತ್ತು ಮಹೇಶ್ವರ ಊಟಕ್ಕೆ ಭೂಮಿಯನ್ನು ದಾನಮಾಡಿದ್ದಾನೆಂದು ಈ ಶಾಸನ ಉಲ್ಲೇಖಿಸಿದೆ. ಈ ದಾನದ ಮೇಲ್ವಿಚಾರಣೆಯನ್ನು ಜೈನರಿಗೆ ಕಾಲರೂಪನಾದ ವೀರಗೊಗ್ಗಿ ದೇವರಸನು ನೋಡಿಕೊಳ್ಳುವನೆಂದು ಹೇಳಿದೆ.

ಶಾಸನದ ಸಂಖ್ಯೆ : ೧೯

ಗ್ರಾಮ : ಅಣ್ಣಿಗೇರಿ ಸ್ಥಳ : ಬನಶಂಕರಿ ಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೧೮೬, ೮೮

ವರದಿ/ಪ್ರಕಟಣೆ : (S.I.I, xv, II 72, B.K No. 2960f 1928-29)

ಈ ಶಾಸನ ಬಮ್ಮದೇವ ದಂಢಾಧಿಪನ ಕೆಳಗೆ ಅದಿಕಾರಿಯಾಗಿದ್ದ ಮಹಾಪ್ರದಾನಬಲ್ಲಯ ಸಾಹಣಿಯ ಸೇವಕನಾಗಿ, ಬೆಳ್ಳಲನಾಡಿನ ಹೆಗ್ಗಡೆಯಾಗಿ ಆಳುತ್ತಿದ್ದ ಕೇಶಭಟ್ಟಯ್ಯ ದಂಡನಾಯಕನು ಅಣ್ಣಿಗೆಜೆಯ ಐದು

ಬ್ರಹ್ಮಪುರುಗಳ ಬ್ರಾಹ್ಮಣರಿಗೆ ಭೂಮಿಯನ್ನು ದಾನವಾಗ ಟ್ಟನೆಂದು ಈ ಶಾಸನದಲ್ಲಿ ಉಲ್ಲೇಖಿಸಿದೆ. ಇದರಿಂದ ಅಣ್ಣಿಗೇರಿಯಲ್ಲಿ ಬ್ರಾಹ್ಮಣರು ವಾಸವಾಗಿದ್ದ ಐದು ಬ್ರಹ್ಮಪುರಿ ಬ್ರಾಹ್ಮಣರಕೇರಿ ಗಳಿದ್ದವೆಂದು ಗೊತ್ತಾಗುತ್ತದೆ.

ಶಾಸನದ ಸಂಖ್ಯೆ : ೨೦

| | | | |
|---|---|---|---|
| ಗ್ರಾಮ | : ಅಣ್ಣಿಗೇರಿ | ಸ್ಥಳ | : ಅಮೃತೇಶ್ವರ ಗುಡಿ ಪ್ರಕಾರ |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೧೯೦ |
| ವರದಿ/ಪ್ರಕಟಣೆ | : (S.I.I, xv, 149, B.K No. 192, 0f 1928-29) | | |

ಈ ಶಾಸನ ಸ್ವಯಂಭು ಅಮೃತೇಶ್ವರ ದೇವಿಗೆ ಪ್ರತಿ ಅಮಾವಾಸ್ಯೆಯ ಪೂಜೆ ಮತ್ತು ನೈವೇದ್ಯಕ್ಕಾಗಿ ಮಹಾಮಂಡಲೇಶ್ವರ ಬಾಚಿದೇವರಸನು ಧಾನ್ಯವನ್ನು ದಾನ ಮಾಡಿದ್ದಾನೆ. ಈ ದಾನವನ್ನು ರಾಜರು, ತ್ರಿವರ್ಗದವರು, ಸಮಯಗಳು ಮತ್ತು ಒಂದು ಸಾವಿರ ದೇವ ಪುತ್ರರು, ಮಹಾಜನರು ರಕ್ಷಿಸುರವರೆಂದು ಇದರಲ್ಲಿ ಹೇಳಿದೆ.

ಶಾಸನದ ಸಂಖ್ಯೆ : ೨೧

| | | | |
|---|---|---|---|
| ಗ್ರಾಮ | : ಅಣ್ಣಿಗೇರಿ | ಸ್ಥಳ | : ಅಮೃತೇಶ್ವರಗುಡಿ ಕಂಬದಲ್ಲಿದೆ. |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೧೯೭ |
| ವರದಿ/ಪ್ರಕಟಣೆ | : (S.I.I, xv, II 213, B.K No. 187, 0f 1928-29) | | |

ಶಾಸನದ ಸಾರಾಂಶ : ಈ ಶಾಸನ ಮಹಾಪ್ರಧಾನ ಲಕ್ಷ್ಮಿದೇವ ದಣ್ಣಾಯಕನ ಅಳಿಯನಾದ ಸಂಗಯ್ಯ ದಣ್ಣಾಯಕನು ರಾಜಧಾನಿ ಅಣ್ಣಿಗೆಜೆಯ ಅಮೃತೇಶ್ವರ ದೇವರಿಗೆ ಭೂಮಿಯನ್ನು ದತ್ತಿಯಾಗಿ ಬಿಟ್ಟುದನ್ನು ಇದರಲ್ಲಿ ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೨೨

| | | | |
|---|---|---|---|
| ಗ್ರಾಮ | : ಅಣ್ಣಿಗೇರಿ | ಸ್ಥಳ | : ಬನಶಂಕರಿ ಗುಡಿ ಎದುರು |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೧, ೧೨ನೆಯ ಶತಮಾನ |
| ವರದಿ/ಪ್ರಕಟಣೆ | : (S.I.I, xv, II 51, B.K No. 197, 0f 1928-29) | | |

ಈ ಶಾಸನ ಇಮ್ಮಡಿ ಕೀರ್ತಿವರ್ಮನ ಕಾಲಕ್ಕೆ ಸೇರಿದ ಮತ್ತು ಆತನ ೭ ನೇ ವರ್ಷದ ಆಳ್ವಿಕೆಯದು ಈ ಶಾಸನ ಜೇಬುಲಗೇರಿ ಗಾಮುಂಡ ಕಲಿಮ್ಮ ಚೇದಿಯ ಜೈನ ದೇವಾಲಯವನ್ನು ಮಾಡಸಿದ್ದನ್ನು ದಾಖಲಿಸುತ್ತದೆ. ಕೊಂಡಶುಲದ ಕುಪ್ಪಕೀರ್ತಿ ವಲ್ಲೂನ ಈ ದೇವಾಲಯದ ಮುಂದೆ ಮೂರ್ತಿಯನ್ನು ಕೆತ್ತಿಸಿದನು.

ಶಾಸನದ ಸಂಖ್ಯೆ : ೨೩

| | | | |
|---|---|---|---|
| ಗ್ರಾಮ | : ಅಣ್ಣಿಗೇರಿ | ಸ್ಥಳ | : ಗುಳ್ಳಿಕೇರಿ ಬಸವಣ್ಣನಗುಡಿ ಎದುರು |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೧೦೩ |
| ವರದಿ/ಪ್ರಕಟಣೆ | : (S.I.I, xv, 20, B.K No. 210, 0f 1928-29) | | |

ಈ ಶಾಸನ ಕಾಲ ಸಿದ್ಧಾರ್ಥಿ ಉತ್ತರಾಯ ಸಂಕ್ರಾಂತಿ ಇದು ಕ್ರಿ.ಶ. ೧೧೩೯ ಡಿಸೆಂಬರ್ ೨೫, ಸೋಮವಾರಕ್ಕೆ ಸಮವಾಗುತ್ತದೆ. ಇದು ಇಮ್ಮಡಿ ಜಗದೇಕಮಲ್ಲನ ಕಾಲಕ್ಕೆ ಸೇರಿದ ಇದು ದಾನ ಮಾಡಿದ್ದನ್ನು ದಾಖಲಿಸಿದಂತಿದೆ. ಉಳಿದ ವಿವರ ಅಸ್ಪಷ್ಟವಾಗಿದೆ.

ಶಾಸನದ ಸಂಖ್ಯೆ : ೨೪

ಗ್ರಾಮ : ಅಣ್ಣಿಗೇರಿ

ಸ್ಥಳ : ಪುರದ ವೀರಪ್ಪನ ಗುಡಿ ಅಶ್ವತ್ಥಕಟ್ಟೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧, ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 130, B.K No. 209,0f 1928-29)

ಶಾಸನದ ಸಾರಾಂಶ : ಲಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೧, ೧೨ನೇ ಶತಮಾನ ಈ ಶಾಸನ ಬಿಜ್ಜಳ ಮತ್ತು ಆತನ ಬಿರುದು ಚಕ್ರವರ್ತಿಯನ್ನು ಉಲ್ಲೇಖಿಸುತ್ತದೆ. ಅವನು ರಾಯಮುರಾರಿ ಸೋವಿದೇವ ನಿರಬಹುದು. ಹರಿದೇವ ಚಮೂಪನ ಹೆಸರನ್ನು ತಿಳಿಸುತ್ತದೆ. ಕಳಚೂರಿ ವೆಂಕನಾಯಕ ಹೆಸರು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ. ಉಳಿದ ವಿವರ ಅಸ್ಪಷ್ಟ

ಶಾಸನದ ಸಂಖ್ಯೆ : ೨೫

ಗ್ರಾಮ : ಅಣ್ಣಿಗೇರಿ

ಸ್ಥಳ : ಜೈನ ಬಸದಿ ಹತ್ತಿರ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧, ೧೨ ನೇ ಶತಮಾನ

ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ ೧೯೭೫, ಪು. ೨೨

ಶಾಸನ ಅಣ್ಣಿಗೇರಿಯ ಬಸದಿಗೆ ದಾನವನ್ನು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೨೬

ಗ್ರಾಮ : ಅರೆಕುರಹಟ್ಟಿ

ಸ್ಥಳ : ಹನುಮಂತ ದೇವರಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧, ೧೨ ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 49, B.K No. 221, 0f 1928-29)

ಶಾಸನದ ಸಾರಾಂಶ : ಈ ಶಾಸನ ತ್ರುಟಿತವಾಗಿದ್ದು ಮುಮ್ಮರಿದಂಡ ಮತ್ತು ಹಿರಿಯ ಕುರಿಹಟ್ಟಿಯ ಐವತ್ತಕ್ಕೆಲುಗಳಿಂದ ಕವಲೇಶ್ವರ ದೇವರಿಗೆ ವಿವಿಧ ದಾನವನ್ನು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೨೭

ಗ್ರಾಮ : ಕುರಿಹಟ್ಟಿ

ಸ್ಥಳ : ಹನುಮಂತ ದೇವರಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೧, ೧೨ ನೇ ಶತಮಾನ

ವರದಿ/ಪ್ರಕಟಣೆ : (S.I.I, xi,-i 45, B.K No. 231, 0f 1928-29)

ಈ ಶಾಸನ ಬೆಳ್ವಲ ಪುರಕರದೇಶದ ದಂಡನಾಯಕ ಸೋಬನರಸನಿಂದ ಕಾರಣಗುರಿಪಟ್ಟಿ ಗ್ರಾಮದಾನವನ್ನು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೨೮ ಅ

ಗ್ರಾಮ : ತುಪ್ಪದ ಕುರಹಟ್ಟಿ ಸ್ಥಳ : ಹನುಮಂತ ದೇವರಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೧, ಶತಮಾನ

ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ, ೧೯೭೫, ಪು. ೨೧

ಈ ಶಾಸನ ದೇವಾಲಯಕ್ಕೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಉಳಿದ ವಿವರ ಅಸ್ಪಷ್ಟ.

ಶಾಸನದ ಸಂಖ್ಯೆ : ೨೯ ಬ

ಗ್ರಾಮ : ತುಪ್ಪದ ಕುರಹಟ್ಟಿ ಸ್ಥಳ : ಹನುಮಂತ ದೇವರಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೧, ೧೨ ನೇ ಶತಮಾನ

ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ, ೧೯೭೫, ಪು. ೨೧

ಶಾಸನ ತ್ರುಟಿತವಾಗಿದ್ದು ಪ್ರಾರಂಭದಲ್ಲಿ ಫಲಶ್ರುತಿ ಪದ್ಯಗಳು ಮಾತ್ರ ಉಳಿದಿದೆ.

ಶಾಸನದ ಸಂಖ್ಯೆ : ೩೦ ಕ

ಗ್ರಾಮ : ತುಪ್ಪದಕುರಹಟ್ಟಿ ಸ್ಥಳ : ಪಂಚಲಿಗೇಶ್ವಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೧, ೧೨ ನೇ ಶತಮಾನ

ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ, ೧೦೭೫, ಪು. ೨೧

ಈ ಶಾಸನವು ಸಂಪೂರ್ಣ ನಾಶವಾಗಿದೆ.

ಶಾಸನದ ಸಂಖ್ಯೆ : ೩೧

ಗ್ರಾಮ : ಅಣ್ಣಿಗೇರಿ ಸ್ಥಳ : ಅಮೃತೇಶ್ವರರ ದೇವಾಲಯದ ಮಂಟಪದಲ್ಲಿ ಮೇಲ್ಭಾವಣಿ ವಿನಾಯಕ ಪೀಠ ಮೂರ್ತಿಯಲ್ಲಿದೆ.

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೨ ನೇ ಶತಮಾನ

ವರದಿ/ಪ್ರಕಟಣೆ : (S.I.I, xx, 304, B.K No. 98, 0f 1936-37)

ಈ ಶಾಸನ ಲಿದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೨ನೇ ಶತಮಾನ ಈ ಶಾಸನದ ನಾಸೀರ್ವರ ಸಮಯದ ಎಂದು ವರ್ಣಿಸಲ್ಪಡುವ ದುಂಡದೇವನ ಪುತ್ರರಾದ ಮ್ಯುಣ್ಣ ಮತ್ತು ನಾಯಕಿಯರು, ಅಣ್ಣಿಗೇರಿಯ ಅಮೃತೇಶ್ವರ ದೇವಪುತ್ರರು ಮೂರ್ತಿಯನ್ನು ಮಾಡಿದ್ದನ್ನು ದಾಖಲಿಸುತ್ತದೆ.

ಶಾಸನದ ಸಂಖ್ಯೆ : ೩೨

ಗ್ರಾಮ : ಕುರಿಹಟ್ಟಿ ಸ್ಥಳ : ಶಂಕರಲಿಂಗ ಗುಡಿ ಗೋಡೆ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೨ ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 95, B.K No. 238, 0f 1928-29)

ಈ ಶಾಸನ ಹಾಳಾಗಿದೆ. ಲಿಪಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೨ ನೇ ಶತಮಾನ ಈ ಶಾಸನ ಚಾಲುಕ್ಯ ದೊರೆಯ ಕಾಲವನ್ನು ಉಲ್ಲೇಖಿಸಿದೆ. ಶಂಕರ ದೇವರಿಗೆ ದೀಪ ಉಳಿಸುವುದಕ್ಕಾಗಿ ಎಣ್ಣೆಗಾಣ ಮತ್ತು ಹಲವಾರು ದಾನಗಳನ್ನು ಮಾಡಿದ್ದನ್ನು ದಾಖಲಿಸಿವೆ. ಈ ದಾನವನ್ನು ಆಗ್ರಹಾರದ ಮಹಾ ಜನಗಳು ಮತ್ತು ಉಳಿದವರು ಮಾಡಿದರೆಂದಿದೆ.

ಶಾಸನದ ಸಂಖ್ಯೆ : ೩೩

ಗ್ರಾಮ : ಕುರಿಹಟ್ಟಿ | ಸ್ಥಳ : ಹನುಮಂತದೇವರಗುಡಿ ಹತ್ತಿರ

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೨ ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 95, B.K No. 232, 0f 1928-29)

ಈ ಶಾಸನ ವಿಷ್ಣುವಂಶದ ಪ್ರಮುಖನೊಬ್ಬನ ಉಲ್ಲೇಖವಿದೆ.

ಶಾಸನದ ಸಂಖ್ಯೆ : ೩೪

ಗ್ರಾಮ : ಕೊಮರಗೊಪ್ಪ | ಸ್ಥಳ : ಶಿವದೇವಾಲಯ ಎದುರು

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೨ ನೇ ಶತಮಾನ

ವರದಿ/ಪ್ರಕಟಣೆ : (S.I.I, xi, I ; 186, B.K No. 229, 0f 1928-29)

ಈ ಶಾಸನ ಸಮಧಿಗತ ಪಂಚಮಹಾಶಬ್ದ ಬಿರುದಿನ ಮಂಡಳಿಕನ ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೩೫

ಗ್ರಾಮ : ಕೊಮರಗೊಪ್ಪ | ಸ್ಥಳ : ಶಿವದೇವಾಲಯ ಎದುರು

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 587, B.K No. 230, 0f 1928-29)

ಲಿಪಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೨ ನೇ ಶತಮಾನ ಈ ಶಾಸನ ಜೈನ ಮುನಿಗಳಿಗೆ ಹಣ ದಾನ ಮಾಡಿದ್ದನ್ನು ದಾಖಲಿಸಿದೆ. ಬಾಲಚಂದ್ರ ಸಿದ್ಧಾಂತ ದೇವನ ಶಿಷ್ಯ ಚಾಳುಕಬ್ಬೆಯ ಪತಿ ಪೆರ್ಗ್ಗಡೆ ವಾಸಿಯಣ್ಣನು ಗದ್ಯಾಣವನ್ನು ಧಾನ ಮಾಡಿದ್ದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಶಾಸನದ ಸಂಖ್ಯೆ : ೩೬

ಗ್ರಾಮ : ನಾಗರಹಳ್ಳಿ | ಸ್ಥಳ : ಹನುಮಂತ ದೇವರಗುಡಿ ಎದುರು

ಲಿಪಿ ಮತ್ತು ಭಾಷೆ : ಕನ್ನಡ | ಕಾಲ : ಕ್ರಿ.ಶ. ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I,589, B.K No. 240, 0f 1928-29)

ಲಿಪದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೨ ನೇ ಶತಮಾನ ಇದು ಶಾಂತನಾಥ ದೇವರ ಹೆಸರನ್ನು ದಾಖಲಿಸುತ್ತದೆ.

ಶಾಸನದ ಸಂಖ್ಯೆ : ೩೭

ಗ್ರಾಮ : ಬೆಣ್ಣೂರು

ಸ್ಥಳ : ಹನುಮಾನ ದೇವಾಲಯದ ಮುಂಭಾಗದಲ್ಲಿ ಇಟ್ಟ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I, xv 93, B.K No. 217, 0f 1928-29)

ಈ ಶಾಸನ ಹಾಳಾಗಿದೆ. ಲಿಪಿದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ. ೮ ಶ ೧೨ನೇ ಶತಮಾನ ಈ ಶಾಸನ ಚಾಲುಕ್ಯ ದೊರೆಯನ್ನು ಉಲ್ಲೇಖಿಸಿದ್ದು ಹೆಸರು ಆಳಿಸಿದೆ. ಭೂಮಿದಾನ ಮಾಡಿದ್ದನ್ನು ಈ ಶಾಸನ ದಾಖಲಿಸಿದೆ. ಶಾಸನದ ಕೊನೆಯ ಭಾಗ ಮಣಿ ನಾಗೋಜನ ಹೆಸರನ್ನು ಮತ್ತು ಬಡಿಗಿಗೆ ದಾನ ಮಾಡಿದ್ದನ್ನು ದಾಖಲಿಸುತ್ತದೆ.

ಶಾಸನದ ಸಂಖ್ಯೆ : ೩೮

ಗ್ರಾಮ : ಬೋಗಾನೂರು

ಸ್ಥಳ : ಕಲ್ಮೇಶ್ವರ ದೇವಾಲಯ ಮುಂದಿನ ನಂದಿಸ್ತಂಭದ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 585, B.K No. 219, 0f 1928-29)

ಲಿಪಿದೃಷ್ಠಿಯಿಂದ ಈ ಶಾಸನ ಕಾಲ ಕ್ರಿ.ಶ. ೧೨ನೇ ಶತಮಾನ. ಇದು ರಾಜಗುರು ಚಂದ್ರಭೂಶಣರು ಬಂಕಾಪುರದ ನಗರೇಶ್ವರ ದೇವರ ಸ್ಥಾನ ಚಾರ್ಯಲಾಗಿದ್ದರೆಂಬುದನ್ನು ದಾಖಲಿಸುತ್ತದೆ. ಈ ಸ್ಥಳ ಇಂದ್ರವಲ್ಲಬನ ರಾಜಧಾನಿಯೆಂದು ವರ್ಣಿಸಿದೆ. ಅದು ರಾಷ್ಟ್ರಕೂಟ ದೊರೆ ಇಂದ್ರನಿರಬೇಕು.

ಶಾಸನದ ಸಂಖ್ಯೆ : ೩೯

ಗ್ರಾಮ : ಶಿಶುವನಹಳ್ಳಿ

ಸ್ಥಳ : ಹನುಮಂತ ದೇವಾಲಯದಲ್ಲಿ ಇಟ್ಟ ವೀರಗಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 590, B.K No. 244, 0f 1928-29)

ಲಿಪಿದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೨ ನೇ ಶತಮಾನ ಈ ಶಾಸನ ಗೋ ಆಕ್ರಮಣ ಮತ್ತು ಸಿಸುವಳ್ಳಿ ಗ್ರಾಮದ ಹೆಸರನ್ನು ದಾಖಲಿಸಿದೆ.

ಶಾಸನದ ಸಂಖ್ಯೆ : ೪೦

ಗ್ರಾಮ : ಶಿರೂರ

ಸ್ಥಳ : ಹಳೇಗ್ರಾಮದ ಹೆಬ್ಬಾಗಿಲಿನಲ್ಲಿ ಬಿದ್ದಿರುವ ಶಾಸನ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 753, B.K No. 242, 0f 1928-29)

ತ್ರುಟಿತಗೊಂಡಿದ್ದು ಪೂರ್ತಿನಶಿಸಿ ಹೋಗಿದೆ.

ಶಾಸನದ ಸಂಖ್ಯೆ : ೪೧

ಗ್ರಾಮ : ಮೊರಬ
ಸ್ಥಳ : ಬಸವಣ್ಣ ದೇವಾಲಯದ ಮುಂಭಾಗದಲ್ಲಿ ಇಟ್ಟಶಾಸನ
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೨ನೇ ಶತಮಾನ
ವರದಿ/ಪ್ರಕಟಣೆ : (S.I.I, xv, 754, B.K No. 235, 0f 1928-29)

ಹಾಳಾಗಿದೆ. ಈ ಶಾಸನ ಭೂಮಿ ದಾನ ಮಾಡಿದ್ದನ್ನು ದಾಖಲಿಸಿದೆ.

ಶಾಸನದ ಸಂಖ್ಯೆ : ೪೨

ಗ್ರಾಮ : ಮೊರಬ
ಸ್ಥಳ : ಕಲ್ಮೇಶ್ವರ ದೇವಾಲಯದ ಭಿತ್ತಿಗೆ ಕಟ್ಟಿದ ತ್ರುಟಿತ ಕಲ್ಲಿನ ಮೇಲೆ
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೨ನೇ ಶತಮಾನ
ವರದಿ/ಪ್ರಕಟಣೆ : (S.I.I, xv, 588, B.K No. 236, 0f 1928-29)

ಈ ಶಾಸನ ಹಾಳಾಗಿದೆ. ಲಿಪಿದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೨ನೇ ಶತಮಾನ ಇದು ನಿರುರಮ ಮೊರಸಿಂಗಯ್ಯನು ಮತ್ತು ಸೀವಟದ ಬೆಳ್ಳಗಾವುಂಡನ ಹೆಸರನ್ನು ದಾಖಲಿಸಿದೆ ಉಳಿದ ವಿವರ ಅಸ್ಪಷ್ಟ

ಶಾಸನದ ಸಂಖ್ಯೆ : ೪೩

ಗ್ರಾಮ : ಹಸನಿ
ಸ್ಥಳ : ಹನುಮಂತ ದೇವಾಲಯದ ಮುಂಭಾಗದಲ್ಲಿ ವೀರಗಲ್ಲಿನ ಮೇಲೆ
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೨ನೇ ಶತಮಾನ
ವರದಿ/ಪ್ರಕಟಣೆ : (S.I.I, xv, 586, B.K No. 227, 0f 1928-29)

ಹಾಳಾಗಿದೆ. ಲಿಪಿದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ ೧೨ ನೇ ಶತಮಾನ ವೀರನ ಸ್ಮರಣಾರ್ಥ ಭೂಮಿ ದಾನ ಮಾಡಿದ್ದನ್ನು ಇದು ದಾಖಲಿಸುತ್ತದೆ. ಈ ಶಾಸನದಲ್ಲಿ ನಾಗರ್‍ಯನ ಹೆಸರು ಇದೆ.

ಶಾಸನದ ಸಂಖ್ಯೆ : ೪೪

ಗ್ರಾಮ : ಹಾಳುಕುಸುಗಲ್
ಸ್ಥಳ : ಸಿದ್ಧೇಶ್ವರ ದೇವಾಲಯದಲ್ಲಿ ಇಟ್ಟಕಲ್ಲಿನ ಮೇಲೆ
ಲಿಪಿ ಮತ್ತು ಭಾಷೆ : ಕನ್ನಡ
ಕಾಲ : ಕ್ರಿ.ಶ. ೧೨ನೇ ಶತಮಾನ
ವರದಿ/ಪ್ರಕಟಣೆ : (S.I.I, xv, 94, B.K No. 224, 0f 1928-29)

ಲಿಪಿದೃಷ್ಠಿಯಿಂದ ಈ ಶಾಸನದ ಕಾಲ ೧೨ ನೇ ಶತಮಾನದ ಇದು ಚಾಲುಕ್ಯ ದೊರೆಯನ್ನು ಮತ್ತು ಆತನ ಪ್ರಶಸ್ತಿಯನ್ನೊಳಗೊಂಡಿದ್ದನ್ನು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೪೫

ಗ್ರಾಮ : ಅಣ್ಣಿಗೇರಿ ಸ್ಥಳ : ಅಮೃತೇಶ್ವರ ಗುಡಿ ಪ್ರಕಾರದಲ್ಲಿದೆ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೨೦೨

ವರದಿ/ಪ್ರಕಟಣೆ : (S.I.I, xv, 216, B.K No. 1930, 0f 1928-29)

ಈ ಶಾಸನ ವೀರಬಲ್ಲಾಳನ ಅಮಿತ ಅಮೃತ, ಕಲ್ಲು, ಮಸಣಯ್ಯ ಬಡವ ನಾಲ್ವರು ದಂಡನಾಯಕರಣ್ಣಿ ಒಬ್ಬನಾದ ಬಸವಯ್ಯ ದಂಡನಾಯಕನು ಸ್ವಯಂಭು ಅಮೃತೇಶ್ವರ ದೇವರ ಪೂಜೆಗಾಗಿ ಭೂದಾನ ಮಾಡಿದ್ದಾನೆಂದು ಈ ಶಾಸನವು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೪೬

ಗ್ರಾಮ : ಅಣ್ಣಿಗೇರಿ ಸ್ಥಳ : ಅಮೃತೇಶ್ವರ ದೇವಾಲಯದ ಮಂಟಪದಲ್ಲಿ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೨೦೫

ವರದಿ/ಪ್ರಕಟಣೆ : (S.I.I, xv, 217, B.K No. 191, 0f 1928-29)

ಈ ಶಾಸನ ಪಂಡಿತಯ್ಯ ದಣ್ಣಾಯಕನು ಬೆಳ್ವೂಲ ದೇಶವನ್ನು ಆಳುತ್ತಿರುವ ಕಾಲದಲ್ಲಿ ಸ್ವಯಂಭು ಅಮೃತೇಶ್ವರ ದೇವರಿಗೆ ಎಲೆ, ಅಡಕೆ, ಕಾಯಿ, ನೈವೇಧ್ಯ ಮೊದಲಾದವುಗಳಿಗಾಗಿ ಎಂದು ಹಾಕಿಸೆಟ್ಟಿಯ ದೇವಯ್ಯನು ಹೊನ್ನನ್ನು ದಾನಮಾಡಿದನೆಂದು ಈ ಶಾಸನ ತಿಳಿಸುತ್ತದೆ.

ಶಾಸನದ ಸಂಖ್ಯೆ : ೪೭

ಗ್ರಾಮ : ಅಣ್ಣಿಗೇರಿ ಸ್ಥಳ : ಬ್ರಹ್ಮೇಶ್ವರ ದೇವಾಲಯ ಬಾಗಿಲು ಹಣೆಪಟ್ಟಿ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೨೨೮, ೨೯

ವರದಿ/ಪ್ರಕಟಣೆ : ಎಂ.ಎಂ. ಕಲಬುರ್ಗಿ ೧೯೭೫, ಪು. ೨೨

ಈ ಶಾಸನ ರುದ್ರಯ್ಯ ಚಂದಯ್ಯರಿಂದ ಅಮೃತೇಶ್ವರ ದೇವಾಲಯದಲ್ಲಿ ಧರ್ಮೇಶ್ವರ ದೇವಾಲಯದ ನಿರ್ಮಾಣದ ಬಗ್ಗೆ ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೪೮

ಗ್ರಾಮ : ಅಣ್ಣಿಗೇರಿ ಸ್ಥಳ : ಅಮೃತೇಶ್ವರಗುಡಿ ಎಡಕಂಬದಲ್ಲಿ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೨೨೧

ವರದಿ/ಪ್ರಕಟಣೆ :

ಈ ಶಾಸನ ವೀರಭುಜಬಳ ಅರಿಯರೇವಿಸೆಟ್ಟಿ ಎಂಬ ಅಧಿಕಾರಿ ರಾಜಧಾ ಪಟ್ಟಣವಾದ ಅಣ್ಣಿಂಗೆಜೆಯ ಸ್ವಯಂಭು ಅಮೃತೇಶ್ವರ ದೇವರಿಗೆ ಪನ್ನಾಯ ಸುಂಕವನ್ನು ದಾನ ಮಾಡಿದನೆಂದ ತಿಳಿಸಿದೆ. ಈ ರೇವಿಸೆಟ್ಟಿಗೆ ಕೊಂಕಣದೇಶ ಚಕ್ರವರ್ತಿ ಎಂಬ ಬಿರುದಿತ್ತು ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಶಾಸನದ ಸಂಖ್ಯೆ : ೪೯

ಗ್ರಾಮ : ಅಣ್ಣಿಗೇರಿ

ಸ್ಥಳ : ಜೈನ ಬಸದಿಯಲ್ಲಿ ಬಿದ್ದಿರುವ ಕಲ್ಲಿನಲ್ಲಿ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨೬೭

ವರದಿ/ಪ್ರಕಟಣೆ : (S.I.I, xv, 163, B.K No. 204, 0f 1928-29)

ಈ ಶಾಸನ ಕೊಂಡಕುಂದಾನ್ವಯ ಮತ್ತು ಮೂಲಸಂಘದ ಸೋಮದೇವಾಚಾರ್ಯರ ಶಿಷ್ಯೆಯಾದ, ಗಣಪತಿ ಸೆಟ್ಟಿಯ ಮಗ ವೀರಯ್ಯನ ಹೆಂಡತಿಯಾದ ಆಕಳಪೆಲಪ್ಪೆಯು ಮರಣ ಹೊಂದಿದನ್ನು ಈ ಶಾಸನ ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೫೦

ಗ್ರಾಮ : ಅಣ್ಣಿಗೇರಿ

ಸ್ಥಳ : ಹನುಮಂತ ದೇವಾಲಯ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨, ೧೩ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 194, B.K No. 200, 0f 1928-29)

ಈ ಶಾಸನ ಹೆಚ್ಚಿನ ಭಾಗ ಹಾಳಾಗಿದೆ. ಈ ಶಾಸನದ ಕಾಲ ಭಾದ್ರಾಪದ ಬ. ಈ ಶಾಸನ ಭೂಮಿದಾನ ಮಾಡಿದ್ದನ್ನು ಮತ್ತು ಮಲ್ಲಿಗೇಶ್ವರ ಮತ್ತು ಭೋಗೇಶ್ವರ ದೇವರ ಹೆಸರನ್ನು ದಾಖಲಿಸಿದೆ. ಉಳಿದ ವಿವರ ಅಸ್ಪಷ್ಟ.

ಶಾಸನದ ಸಂಖ್ಯೆ : ೫೧

ಗ್ರಾಮ : ಅಣ್ಣಿಗೇರಿ

ಸ್ಥಳ : ಉಳವಿ ಬಸಪ್ಪ ದೇವಾಲಯ ಎದುರಿನಲ್ಲಿ ಇಟ್ಟ ಕಲ್ಲಿನ ಮೇಲೆ ಇದೆ.

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨, ೧೩ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 110, B.K No. 211, 0f 1928-29)

ಈ ಶಾಸನ ಬಿಜ್ಜಳ ತ್ರಿಭುವನ ಮಲ್ಲನಕಾಲಕ್ಕೆ ಸೇರಿದೆ ಈ ಶಾಸನ ವಾಸುದೇವನಾಯಕನ ಹೆಸರನ್ನು ಮತ್ತು ಬಳವಳ ದೇಶದ ಆಡಳಿತ ಮತ್ತು ಅಣ್ಣಿಗೇರಿ ದಾಖಲಿಸಿದೆ.

ಶಾಸನದ ಸಂಖ್ಯೆ : ೫೨

ಗ್ರಾಮ : ಹಾಳಕುಸುಗಲ್

ಸ್ಥಳ : ಮನುಮಂತದೇವಾಲಯದಲ್ಲಿ ಬಿದ್ದ ವೀರಗಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೩೭೦, ೭೧

ವರದಿ/ಪ್ರಕಟಣೆ : (S.I.I, xv, 65, B.K No. 226, 0f 1928-29)

ಈ ಶಾಸನದ ಕಾಲ ಶಕ ೧೨೯೨ ಇದು ಕ್ರಿ.ಶ. ೧೩೭೦, ೭೧ ಕ್ಕೆ ಸಮವಾಗುತ್ತದೆ. ಇದು ಯಾಧನುಕಾದಾಡಿ ಬಿದ್ದ ಸ್ಥಳದ ಮತ್ತು ಮರಣವನ್ನು ಉಲ್ಲೇಖಿಸುತ್ತದೆ. ಉಳಿದ ವಿವರ ಅಸ್ಪಷ್ಟ.

ಶಾಸನದ ಸಂಖ್ಯೆ : ೫೩

ಗ್ರಾಮ : ಅಣ್ಣಿಗೇರಿ

ಸ್ಥಳ : ಪವಾಡಿ ಬಸಪ್ಪ ದೇವಾಲಯದ ಮುಂಭಾಗದಲ್ಲಿ ಇಟ್ಟ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨೦೫

ವರದಿ/ಪ್ರಕಟಣೆ : (S.I.I, xv, 634, B.K No. 250, 0f 1928-29)

ಈ ಶಾಸನ ಲಿಪಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೩ನೇ ಶತಮಾನ ಇದು ಚಿಕುಬಾಯ ಪುರಯತಿಪ್ಪ ಹೆಸರನ್ನು ಸೂಚಿಸುತ್ತದೆ.

ಶಾಸನದ ಸಂಖ್ಯೆ : ೫೪

ಗ್ರಾಮ : ಜಾವೂರ

ಸ್ಥಳ : ಹಮುಮಾತದೇವರ ಗುಡಿ ಎದುರು ಸ್ತಂಭದ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೩ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 637, B.K No. 228, 0f 1928-29)

ಲಿಪಿದೃಷ್ಟಿಯಿಂದ ಈ ಶಾಸನ ಕಾಲ ಕ್ರಿ.ಶ. ೧೫ ನೇ ಶತಮಾನ ಕೃಷ್ಣದೇವರಾಯ ಸಮುದ್ರ ಗ್ರಾಮವನ್ನು ಬ್ರಾಹ್ಮಣರಿರಗೆ ಆಗ್ರಹಾರವಾಗಿ ನೀಡಿದ್ದನ್ನು ದಾಖಲಿಸಿದೆ. ಇದನ್ನು ಕೆತ್ತಿದ ರೂವಾರಿ ದೇವೋಜನ ಮಗ ಕರಿಯೋಜ.

ಶಾಸನದ ಸಂಖ್ಯೆ : ೫೫

ಗ್ರಾಮ : ಬಳ್ಳೂರು

ಸ್ಥಳ :ಹನುಮಂತದೇವ ದೇವಾಲಯದಲ್ಲಿ ಇಟ್ಟಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೨೦೫

ವರದಿ/ಪ್ರಕಟಣೆ : (S.I.I, xv, 635, B.K No. 231, 0f 1928-29)

ಲಿಪಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೩ನೇ ಶತಮಾನ ಇದು ಬಾದುಮಯ್ಯ ವ್ಯಕ್ತಿಯ ಹೆಸರನ್ನು ಸೂಚಿಸುತ್ತದೆ. ಉಳಿದ ವಿವರ ಅಸ್ಪಷ್ಟ.

ಶಾಸನದ ಸಂಖ್ಯೆ : ೫೬

ಗ್ರಾಮ : ಬ್ಯಾಲ್ಹಾಳ

ಸ್ಥಳ : ಹನುಮಂತ ದೇವಾಲಯದ ಮುಂಭಾಗದಲ್ಲಿ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೩ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 636, B.K No. 220, 0f 1928-29)

ಲಿಪಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೩ನೇ ಶತಮಾನ ಈ ಶಾಸನ ಸಕಳಚಂದ್ರ ಭಟ್ಟಾಚಾರ್ಯರಿಗೆ

ದಾನ ನೀಡಿದ್ದನ್ನು ಉಲ್ಲೆಖಿಸುತ್ತದೆ. ಈ ದಾನವನ್ನು ಬೀಚಿಸೆಟ್ಟಿ ಮಾಡಿದ್ದನ್ನು ಮೊದಲು ಇದು..... ಮಲ್ಲದೇವನ ಜ್ವಾಲಮಾಲಿನಿ ಬಸದಿಗೆ ನೀಡಿದ್ದನು. ಶಾಸನದ ಎರಡನೇ ಮುಖದಲ್ಲೂ ಜ್ವಾಲಮಾಲಿನಿ ದೇವಿಯ ಉಲ್ಲೇಖವಿದೆ.

ಶಾಸನದ ಸಂಖ್ಯೆ : ೫೭

ಗ್ರಾಮ : ಭದ್ರಾಪೂರ — ಸ್ಥಳ : ಸರ್ವೆನಂ. ೧೯ರ ಹೊಲದಲ್ಲಿದೆ

ಲಿಪಿ ಮತ್ತು ಭಾಷೆ : ಕನ್ನಡ — ಕಾಲ : ಕ್ರಿ.ಶ. ೧೩ನೇ ಶತಮಾನ

ವರದಿ/ಪ್ರಕಟಣೆ : ಅಪ್ಪಮ್ಮ ಎನ್. ಹಂಜೆ, ಕನ್ನಡ ಸಾಹಿತ್ಯ ಪರಿಷಪತ್ರಿಕೆ ಸಂ. ೮೪ ಸಂ.೩ ೨೦೦೬

ಈ ಶಾಸನ ಸ್ಥಳೀಯ ಶ್ರೀ ನಜೀರಅಹ್ಮದ್ ಅಬ್ದುಲಗಣಿ ಇಸ್ಮಾಯ್ಲನ್ನವರ ಅವರ ಸರ್ವೆನಂ. ೧೯ರ ಹೊಲದಲ್ಲಿರುವ ಕ್ರಿ.ಶ. ಸುಮಾರು ೧೩ನೆಯ ಶತಮಾನದ ಶಾಸನವು, ಮಹಿಳೆಯೊಬ್ಬಳು ಹೆಸರು ತ್ರುಟಿತವಾಗಿದೆ. ಬಸದಿಯನ್ನು ನಿರ್ಮಿಸಿದ ವಿಚಾರವನ್ನು ಉಲ್ಲೇಸುತ್ತದೆ.

ಶಾಸನದ ಸಂಖ್ಯೆ : ೫೮

ಗ್ರಾಮ : ಭದ್ರಾಪೂರ — ಸ್ಥಳ : ನರಸಿಂಹದೇವಾಲಯ ಎದುರುನಲ್ಲಿದೆ.

ಲಿಪಿ ಮತ್ತು ಭಾಷೆ : ಕನ್ನಡ — ಕಾಲ : ಕ್ರಿ.ಶ. ೧೩ನೇ ಶತಮಾನ

ವರದಿ/ಪ್ರಕಟಣೆ : ಎಂ.ಎಂ.ಕಲಬುರ್ಗಿ, ೧೯೭೫, ಪು. ೨೨

ಈ ಶಾಸನದಲ್ಲಿ ಮಹಾಲಿಂಗ ದೇವಾಲಯಕ್ಕೆ ನೀಡಿದ ದಾನ ಉಲ್ಲೇಖವಾಗಿದೆ.

ಶಾಸನದ ಸಂಖ್ಯೆ : ೫೯

ಗ್ರಾಮ : ಶಿಶುವಿನಹಳ್ಳಿ — ಸ್ಥಳ : ಹನುಮಂತ ದೇವರಗುಡಿ ವೀರಗಲ್ಲಿನಮೇಲೆ

ಲಿಪಿ ಮತ್ತು ಭಾಷೆ : ಕನ್ನಡ — ಕಾಲ : ಕ್ರಿ.ಶ. ೧೩ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 638, B.K No. 245, 0f 1928-29)

ಈ ಶಾಸನ ಮಹಾನಾಡು ಮತ್ತು ಎಂಟು ಮೆ ಮಠಗಳಿಂದ ಮಲ್ಲಯ್ಯ ನಾಯಿಕನಿಗೆ ಭೂಧಾನ ಮಾಡಿದನ್ನು ಉಲ್ಲೇಖಿಸಿದೆ.

ಶಾಸನದ ಸಂಖ್ಯೆ : ೬೦

ಗ್ರಾಮ : ಅಣ್ಣಿಗೇರಿ — ಸ್ಥಳ : ಚಾವಡಿಯ ಎದುರು ವೀರಗಲ್ಲು

ಲಿಪಿ ಮತ್ತು ಭಾಷೆ : ಕನ್ನಡ — ಕಾಲ : ಕ್ರಿ.ಶ. ೧೩ನೇ ಶತಮಾನ

ವರದಿ/ಪ್ರಕಟಣೆ : (S.I.I, xv, i 32, B.K No. 198, 0f 1928-29)

ಈ ಶಾಸನ ಇದ ಕಾಲ ಅಕಾಲವರ್ಷ ಕಾಲ, ಬಹುಶಃ ೧ನೆಯ ಕೃಷ್ಣನ ಕಾಲಕ್ಕಿಂತ ಮೊದಲೆಂದು ತೋರುವುದು. ಶತ್ರುಗಳು ಅಪಹರಿಸಿಕೊಂಡು ಹೋಗುತ್ತಿದ್ದ ದನಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ನಡೆದ ಕಾಳಗದಲ್ಲಿ ಮಡಿದ ಒಬ್ಬ ವೀರನ ಸ್ಮರಣಾರ್ಥಕವಾಗಿ ಈ ವೀರಗಲ್ಲನ್ನು ನೆಡಲಾಗಿದೆ.

ಶಾಸನದ ಸಂಖ್ಯೆ : ೬೧

ಗ್ರಾಮ : ಅಣ್ಣಿಗೇರಿ

ಸ್ಥಳ : ಅಮೃತೇಶ್ವರ ದೇವಾಲಯದ ಬಾಗಿಲಿನ ಬಲಸ್ತಂಭದ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೪ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 656, B.K No. 188, 0f 1928-29)

ಲಿಪಿದೃಷ್ಠಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೪ನೇ ಶತಮಾನ ಜೋಜಾಡಿದ್ದನ್ನು ತೆಗಳುವ ಉಲ್ಲೇಖ ಈ ಶಾಸನದಲ್ಲಿ ದಾಖಲಿಸಿದೆ.

ಶಾಸನದ ಸಂಖ್ಯೆ : ೬೨

ಗ್ರಾಮ : ಶಿಶುವಿನಹಳ್ಳಿ

ಸ್ಥಳ : ಸರ್ವೆ ನಂ. ೬೬ ರಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೫ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 679, B.K No. 243, 0f 1928-29)

ಶಾಸನದ ಸಾರಾಂಶ : ಲಿಪಿದೃಷ್ಠಿಯಂದ ಈ ಶಾಸನದ ಕಾಲ ಕ್ರಿ.ಶ. ೧೫ನೇ ಶತಮಾನ ಕೃಷ್ಣದೆವರಾಯ ಸಮುದ್ರ ಗ್ರಾಮವನ್ನು ಬ್ರಾಹ್ಮಣರಿರಗೆ ಆಗ್ರಹಾರವಾಗಿ ನೀಡಿದ್ದನ್ನು ದಾಖಲಿಸಿದೆ. ಇದನ್ನು ಕೆತ್ತಿದ ರೂವಾರ ದೇವೋಜನ ಮಗ ಕರಿಯೋಜ.

ಶಾಸನದ ಸಂಖ್ಯೆ : ೬೩

ಗ್ರಾಮ : ಗಂಗೋಳ

ಸ್ಥಳ : ಉಗರಗೋಳ ಯೋಗವರಸೇಯ ಸರ್ವೆನು ೪೧೪ರಲ್ಲಿ ಬಿದ್ದ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೫೨೯

ವರದಿ/ಪ್ರಕಟಣೆ : (S.I.I, xv, 250, B.K No. 223, 0f 1928-29)

ಈ ಶಾಸನ ಹೆಚ್ಚಿನ ಭಾಗ ಅಳಿಸಿದೆ. ಈ ಶಾಸನದ ಕಾಲ ಶಕ ೧೪೫೦ ಸರ್ವಾಧಾರಿ ಸಂವತ್ಸರ ಮಾಘ ಶು. ೭ ಶನಿವಾರ ಇದು ಕ್ರಿ.ಶ. ೧೫೨೯ ಜನವರಿ ೧೬ ಕ್ಕೆ ಸಮುವಾಗುತ್ತದೆ. ಈ ಶಾಸನ ಲೋರ್‌ಗೆರೆಯ ದುರ್ಗಾದಿಪತಿ ವೀರ ನರಸಿಂಘನಾಯಕನನ್ನು ಉಲ್ಲೇಖಿಸುತ್ತವೆ. ಈ ಶಾಸನ ತೋರೆಗೆಡೆ ವೇಂಠೆ ಮತ್ತು ಗುಂಗೊಳಗ್ರಾಮವನ್ನು ದಾಖಲಿಸುತ್ತದೆ.

ಶಾಸನದ ಸಂಖ್ಯೆ : ೬೪

ಗ್ರಾಮ : ಅಣ್ಣಿಗೇರಿ

ಸ್ಥಳ : ಅಮೃತೇಶ್ವರ ದೇವಾಲಯದ ದಕ್ಷಿಣವಾರದ ಬಲ ಮಗ್ಗಿನಲ್ಲಿ

ಲಿಪಿ ಮತ್ತು ಭಾಷೆ : ಕನ್ನಡ

ಕಾಲ : ಕ್ರಿ.ಶ. ೧೫೩೯

ವರದಿ/ಪ್ರಕಟಣೆ : (S.I.I, xv, 254, B.K No.186, 0f 1928-29)

ಲಿಪಿದೃಷ್ಟಿಯಿಂದ ಈ ಶಾಸನ ಕಾಲ ೧೪೬೧ ವಿಕಾರಿ ಬಾದ್ರಪದ ಶು. ೧೨ ಮಂಗಳವಾರ ಇದು ಕ್ರಿ.ಶ. ೧೫೩೯ ಆಗಸ್ಟ್ ೨೬ ಕ್ಕೆ ಸಮವಾಗುತ್ತಧೆ. ಇದು ಬ್ರಾಹ್ಮಣರಿಗೆ ಆನಂದನಿಧಾನ ಮಾಡಿದ್ದನ್ನು ದಾಖಲಿಸಿದೆ. ತುಂಗಭದ್ರಾ ದಂಡೆಯ ಮೇಲೆ ವಿಠಲೇಶ್ವರ ದೇವರ ಎದುರಿನಲ್ಲಿ ಈ ದಾನವನ್ನು ರಾಜನು ಮಾಡಿದನು. ಅಣ್ಣಿಗೇರಿಯ ಅಮೃತೇಶ್ವರ ದೇವರ ಎದುರಿನಲ್ಲಿ ಈ ದಾನವನ್ನು ದಾಖಲಿಸಿದೆ.

ಶಾಸನದ ಸಂಖ್ಯೆ : ೬೫

| | | | |
|---|---|---|---|
| ಗ್ರಾಮ | : ಗುಡಿಸಾಗರ | ಸ್ಥಳ | : ಹಡಪದ ಮಲ್ಲೇಶಪ್ಪನ ಮನೆಯ ಸಮೀಪದಲ್ಲಿ ಕಲ್ಲಿನ ಮೇಲೆ |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೫೪೭ |

ವರದಿ/ಪ್ರಕಟಣೆ : (S.I.I, xv, No. 222, 0f 1928-29)

ಈ ಶಾಸನ ಕಾಲ ಪ್ಲವಂಗ ಸಂವತ್ಸರ ಆಶಾಢ ಶು. ೧೦..... ಇದು ಕ್ರಿ.ಶ. ೧೫೪೭, ಜೂನ್ ೨೭ ಕ್ಕೆ ಸಮವಾಗುತ್ತವೆ. ಈ ಶಾಸನ ಕ್ಷೌರಿಕನಿಗೆ ದಾನ ಮಾಡಿದ್ದನ್ನು ಹೆಸರಿಸಿದೆ. ಶಾಸನದಲ್ಲಿ ಸದಾಶಿವರಾಯನ ಹೆಸರನ್ನು ದಾಖಲಿಸಿದೆ ಉಳಿದ ವಿವರ ಅಸ್ಪಷ್ಟ.

ಶಾಸನದ ಸಂಖ್ಯೆ : ೬೬

| | | | |
|---|---|---|---|
| ಗ್ರಾಮ | : ಬೆಳವಟಿಗೆ | ಸ್ಥಳ | : ರಾಮಲಿಂಗ ದೇವಾಲಯ ಮುಂದೆ ಇರುವ ಕಲ್ಲಿನಲ್ಲಿ |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೫೪೭, ೪೮ |

ವರದಿ/ಪ್ರಕಟಣೆ : (S.I.I, xv, 260, B.K No. 214, 0f 1928-29)

ಈ ಶಾಸನದ ಕಾಲ ಶಕ ೧೪೬೯, ಪ್ಲವಂಗ ೧೦, ಇದು ಕ್ರಿ.ಶ. ೧೮೪೭, ೪೮ ಕ್ಕೆ ಸಮವಾಗುತ್ತದೆ. ತೋರಗಲ್ಲ ಸೀಮೆಯ ...... ನೀಡಿದ ರಾಮರಾಯ ಮತ್ತು ವೆಂಕಟಾದ್ರಿ ತೆರಿಗೆ ವಿನಾಯಿತ ನೀಡಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕೊಂಡೋಜ ಮತ್ತು ಸಿಡೋಜ ಜಾತಿಯವರಿಗೂ ಕೆಲವು ವಿನಾಯ್ತಿ ನೀಡಿದ ವಿಷಯವಿದೆ.

ಶಾಸನದ ಸಂಖ್ಯೆ : ೬೭

| | | | |
|---|---|---|---|
| ಗ್ರಾಮ | : ಅಣ್ಣಿಗೇರಿ | ಸ್ಥಳ | : ಹೊಡೆದ ಬಾವಿಯಲ್ಲಿ ಇಟ್ಟ ಶಾಸನ |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೬೪೯ |

ವರದಿ/ಪ್ರಕಟಣೆ : (S.I.I, xv, 268, B.K No. 202, 0f 1928-29)

ಈ ಶಾಸನ ಕಾಲ ಶಕ ೧೫೬೭, ವ್ಯಯ ಮಾರ್ಗಶಿರ ಶು. ಆದಿತ್ಯವಾರ ಇದು ಕ್ರಿ.ಶ, ೧೬೪೫ ನವಂಬರ್ ೨೧ ಆದಿತ್ಯವಾರಕ್ಕೆ ಸಮವಾಗುತ್ತದೆ. ಇದು ಬಿಜಾಪುರದ ದೊರೆ ಆದಿಲ್‌ಶಾಹಿ ಸುಲ್ತಾನ ಮಹಮಹ್‌ಶಯನ ಕಾಲಕ್ಕೆ ಸೇರಿದೆ.

ಅಣ್ಣಿಗೇರಿಯ ಸೀಮೆಯಲ್ಲಿ ಕಟ್ಟಿದ ರುಸ್ತುಂಪೇಟೆಯ ಮುಖ್ಯಸ್ಥರಿರಗೆ ಮತ್ತು ಸದಸ್ಯರಿಗೆ ಕರವಿನಾಯಿತಿ ದಾನವನ್ನು ಉಲ್ಲೇಖಿಸುತ್ತದೆ. ಇದನ್ನು ಕಟ್ಟಿಸಿದವನ್ನು ಸುಲ್ತಾನನ ದಲ್ಲಾಳಿಯಾದ ರಣದುಲ್ಲಾಖಾನನ ಮಗನಾದ ರುಸ್ತುಂಜಮಸಾಹೇಬನು.

ಶಾಸನದ ಸಂಖ್ಯೆ : ೬೮

ಗ್ರಾಮ : ಹಾಳಾಕುಸುಗಲ್ ಸ್ಥಳ : ಹಿರೇಮಠದ ಸಮೀಪ ಇಟ್ಟ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೬ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 711, B.K No. 225, 0f 1928-29)

ಲಿಪಿದೃಷ್ಮಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೬ನೇ ಶತಮಾನ ಇದು ನವ್ವಲಗುಂದದ ಹೆಸರನ್ನು ಒಳಗೊಂಡಿದೆ. ಈ ಭೂಮಿ ಹಿರೇಮಠಕ್ಕೆ ಸೆರಿದವುವೆಂಬುದನ್ನು ದಾಖಲಿಸಿದೆ.

ಶಾಸನದ ಸಂಖ್ಯೆ : ೬೯

ಗ್ರಾಮ : ತಿರ್ಲಾಪುರ ಸ್ಥಳ : ಗ್ರಾಮದ ಒಂದು ಮೈಲು ಅಂತರದಲ್ಲಿ ಕಲ್ಲಿನ ಮೇಲೆ ಇದೆ.

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೬ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 712, B.K No. 248, 0f 1928-29)

ಲಿಪಿಯ ದೃಷ್ಮಿಯಿಂದ ಈ ಶಾಸನ ಕಾಲ ಕ್ರಿ.ಶ. ೧೬ನೇ ಶತಮಾನ ಇದು ವಿಠಲಾಪುರ ಗ್ರಾಮದ ಹೆಸರನ್ನು ಇದರ ಇನ್ನೊಂದು ಹೆಸರು ಸೀರೆಕೋಣ ಎಂಬ ಹೆಸರನ್ನು ಸೂಚಿಸುತ್ತದೆ. ನಾಗರಿ ಲಿಪಿಯಲ್ಲಿ ಇದು ಬರೆದಿದೆ.

ಶಾಸನದ ಸಂಖ್ಯೆ : ೭೦

ಗ್ರಾಮ : ಬೆಳವಟಿಗೆ ಸ್ಥಳ : ಸರ್ವೆನಂ. ೧೧೭ರಲ್ಲಿ ಬಿದ್ದ ಕಲ್ಲಿನಲ್ಲಿ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೬ನೇ ಶತಮಾನ

ವರದಿ/ಪ್ರಕಟಣೆ : (S.I.I, xv, 710, B.K No. 216, 0f 1928-29)

ಈ ಶಾಸನ ತ್ರುಟಿತವಾಗಿದ್ದು, ಕೆರೆಯನ್ನು ಅಗೆದ ವ್ಯಕ್ತಿಗಳಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೭೧

ಗ್ರಾಮ : ಭದ್ರಾಪುರ ಸ್ಥಳ : ಗ್ರಾಮದ ಚಾವಡಿಯ ಸಮೀಪ ಇಟ್ಟ ಕಲ್ಲಿನ ಮೇಲೆ

ಲಿಪಿ ಮತ್ತು ಭಾಷೆ : ಕನ್ನಡ ಕಾಲ : ಕ್ರಿ.ಶ. ೧೬೭೯

ವರದಿ/ಪ್ರಕಟಣೆ : (S.I.I, xv, 270, B.K No. 218, 0f 1928-29)

ಈ ಶಾಸನದ ಕಾಲ ಶಕ ೧೬೦೧ ಸಿದ್ಧಾರ್ಥಿ ಶ್ರಾವಣ ಶು. ೪ ಇದು ಕ್ರಿ.ಶ. ೧೬೭೯ ಜುಲೈ ೩೧ ಸಮವಾಗುತ್ತದೆ. ಈ ಶಾಸನ ಸಂಗಪ್ಪನಿಗೆ ಗೌಡಿಕೆ ಮತ್ತು ಶಾನಭೋವಿಕೆ ಕೊಟ್ಟಿದನ್ನು ದಾಖಲಿಸಿದೆ. ದೇಸ ಕುಲಕರಣಿಕನ ಹೆಸರು ಹನುಮಂತ ಮತ್ತು ಶಂಕರಲಿಂಗನ ಹೆಸರು ಈ ಶಾಸನ ದಾಖಲಿಸುತ್ತದೆ.

ಶಾಸನದ ಸಂಖ್ಯೆ : ೭೨

| | | | |
|---|---|---|---|
| ಗ್ರಾಮ | : ಬೆಳವಟಿಗೆ | ಸ್ಥಳ | : ಸರ್ವೆ ನಂ ೧೧೭ ರಲ್ಲಿನ ಕಲ್ಲಿನಲ್ಲಿ |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೭ನೇ ಶತಮಾನ |
| ವರದಿ/ಪ್ರಕಟಣೆ | : (S.I.I, xv, 722, B.K No. 216, 0f 1928-29) | | |

ಲಿಪಿದೃಷ್ಟಿಯಿಂದ ಈ ಶಾಸನದ ಕಾಲ ಕ್ರಿ.ಶ. ೧೭ನೇ ಶತಮಾನ ದೇಸಾಯಿ ನೇಮಣ ಬಕದೇಸ ಕಲಕರಣಿ ಗೋಪಣಕೆರೆ ಕಟ್ಟಿಸಿದುದನ್ನು ದಾಖಲಿಸಿದೆ. ಭೂವಿಧಾನ ಮಾಡಿದುದನ್ನು, ಮನೆಕೆಲಸ ಮಾಡಿದುದನ್ನು ಇದು ಉಲ್ಲೇಖಿಸುತ್ತದೆ.

ಶಾಸನದ ಸಂಖ್ಯೆ : ೭೩

| | | | |
|---|---|---|---|
| ಗ್ರಾಮ | : ತಲಿಮೊರಬ | ಸ್ಥಳ | : ಪಂಚಮುಕಿ ಹನುಮಂತ ದೇವಾಲಯದ ಅಧಿಷ್ಠಾನಕ್ಕೆ ಕಟ್ಟಿದ ಕಲ್ಲಿನಲ್ಲಿ |
| ಲಿಪಿ ಮತ್ತು ಭಾಷೆ | : ಕನ್ನಡ | ಕಾಲ | : ಕ್ರಿ.ಶ. ೧೮೪೧ |
| ವರದಿ/ಪ್ರಕಟಣೆ | : (S.I.I, xv, 733, B.K No. 247, 0f 1928-29) | | |

ಈ ಶಾಸನದ ಕಾಲ ಕ್ರಿ.ಶ. ೧೭೬೩ ಪ್ಲವ ವೈಶಾಖ ವಂ ೩೦, ಇದು ಕ್ರಿ.ಶ. ೧೮೪೧ ವೈ ೩೦ ಕ್ಕೆ ಸರ್ವವಾಗುತ್ತದೆ. ಈ ಶಾಸನದ ಮೊದಲ ಮತ್ತು ಎರಡನೇ ಸಾಲು ಕನ್ನ ಲಿಪಿಯಲ್ಲಿದ್ದು ಶ್ರೀ ದತ್ತಾತ್ರೆಯ ಅವಧೂತರನ್ನು ಸೂಚಿಸುತ್ತದೆ. ಮೂರನೇ ಸಾಲುನಾಗರಿ ಲಿಪಿಯಲ್ಲಿದ್ದು ಶಾಸನದ ಕಾಲವನ್ನು ಉಲ್ಲೇಖಿಸುತ್ತದೆ.

# ಅಧ್ಯಾಯ ನಾಲ್ಕು

# ದೇವಾಲಯಗಳು

## ೧. ಪೀಠಿಕೆ

ಪ್ರತಿಯೊಂದು ನೆಲಯಾಗಿ ಸಾರ್ವಜನಿಕ ಸಮಾವೇಶಕ್ಕೊಂದು ಸ್ಥಳವಾದ ಕಟ್ಟಡವೇ ದೇವಾಲಯ. (ಎಚ್.ಎಸ್. ಗೋಪಾಲರಾವ್, ೧೯೯೩, ಪುಟ. ೨೭) ದೇವಾಲಯಗಳು ಧಾರ್ಮಿಕ ಶ್ರದ್ಧೆಯ ಪ್ರಮುಖ ಸ್ಥಾನಗಳಾಗಿವೆ. ಇವುಗಳಿಗೆ ತನ್ನದೇ ಆದ ಸಂಸ್ಕೃತಿ ಭವ್ಯ ಪರಂಪರೆ ಇದೆ. ನಾಡಿನ ನಾಡಿಯನ್ನು ಹಿಡಿದು ನಡೆಸುತ್ತಿದ್ದ ಸಾಂಸ್ಕೃತಿ ಕೇಂದ್ರ ಇದು. ದೇವಾಲಯಗಳು ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳಾಗಿವೆ. (ಚಿದಾನಂದ ಮೂರ್ತಿ ಎಂ. ೧೯೭೯, ಪುಟ ೧೭೫) ಪ್ರತಿಮೆಗಳ ಕಲ್ಪನೆ ಹುಟ್ಟಿದಾಗ ಆಯಗಳಿಗೆ ರಕ್ಷಣೆ ನೀಡಿದ ಆಲಯಗಳಿವು. ದೇವಾಲಯದ 'ವಾಸ್ತಕೃತಿ' ಎಂಬ ಶಬ್ದವು ಸಂಕುಚಿತ ಅರ್ಥದಲ್ಲಿ ಗಾತ್ರದ ದೃಷ್ಟಿಯಿಂದ ಸಣ್ಣವೂ ಇರಬಹುದು ದೊಡ್ಡವೂ ಇರಬಹುದು. ಕಲ್ಲಿನಿಂದ ಮರ ಮಟ್ಟಿನಿಂದ ನಿರ್ಮಿತಿಯೂ ಆಗಬಹುದು. ಒಟ್ಟಾರೆ ಇದು ವಾಸ್ತುಕೃತಿಯಾಗಿದೆ. (ಶಿವರಾಮ ಕಾರಂತ ೧೯೭೫, ಪುಟ ೨೯) ವಾಸ್ತು ರಚನೆಯಲ್ಲಿ ಅಂದು ಇಂದು ಉಳಿದಿರುವುದು ಗುಡಗೋಪುರಗಳೇ ಇದು ಸಾಂಸ್ಕೃತಿಕ ಸಂಪತ್ತು.

ನವಲಗುಂದ ತಾಲ್ಲೂಕು ಚಾರಿತ್ರಿಕ ಮಹತ್ವವನ್ನು ಪಡೆದ ಠಾಣವಾಗಿದೆ. ಜೊತೆಗೆ ಕಲೆ ಮತ್ತು ವಾಸ್ತುಶಿಲ್ಪಗಳ ಅಪೂರ್ವ ನೆಲೆಯಾಗಿದೆ. ಈ ನೆಲೆ ರಾಷ್ಟ್ರಕೂಟರು, ಕಲ್ಯಾಣಿಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಇಂಥ ನೆಲ ಧಾರ್ಮಿಕ ಮಹತ್ವವನ್ನು ಹೊಂದಿದೆ. ಕಲೆ ಮತ್ತು ವಾಸ್ತುಶಿಲ್ಪಗಳ ಸ್ಥೂಲ ಪರಿಚಯ ಇಲ್ಲಿ ಮಾಡಲಾಗಿದೆ.

ಈ ತಾಲ್ಲೂಕನ್ನು ಆಳಿದ ರಾಜಮನೆತನಗಳು ತಾಲ್ಲೂಕಿನಾದ್ಯಂತ ಅನೇಕ ದೇವಾಲಯ, ಕೆರೆಕಟ್ಟೆ, ಬಾವಿಗಳು,ಬಸದಿಗಳು, ಮಠಗಳು, ಆಗ್ರಹಾರಗಳನ್ನು ಸ್ಥಾಪಿಸಿವೆ. ವೈವಿಧ್ಯಪೂರ್ಣವಾದ ಈ ಪುಣ್ಯಕಾರ್ಯಗಳ ಈ ತಾಲ್ಲೂಕಿನ ಸಾಂಸ್ಕೃತಿಕ ಬೆಳವಣಿಗೆಗೆ ಭದ್ರಬುನಾದಿಯನ್ನು ಒದಗಿಸಿದುದಲ್ಲದೆ ಜನರ ಧಾರ್ಮಿಕ ಮನೋಭಾವನೆಯನ್ನು ಸಮೃದ್ಧಿಗೊಳಿಸುವಲ್ಲಿ ಸಹಕಾರಿಯಾಗಿವೆ. ಈ ದೇವಾಲಯಗಳ ಚರಿತ್ರೆ ವಿವಿಧ ಕಾಲಘಟ್ಟಗಳಲ್ಲಿ ಪ್ರಚಲಿತದಲ್ಲಿದ್ದ ಧರ್ಮದ ವಿವಿಧ ಛಾಯಗಳನ್ನು ಪ್ರಾಧಾನ್ಯತೆಗಳನ್ನು ಪ್ರತಿಬಿಂಬಿಸುವುದಲ್ಲದೆ ಜನರ ಅಭಿರುಚಿ, ಧರ್ಮದಲ್ಲಿ ಆಸ್ಥೆ, ಸಾಮಾಜಿಕ ಸಂಪ್ರದಾಯ, ನಂಬಿಕೆ ಇತ್ಯಾದಿ ಸಮಕಾಲೀನ ವಿಷಯಗಳನ್ನು ತಿಳಿಸುವ ದಾಖಲೆಗಳಾಗಿವೆ. ಇಲ್ಲಿರುವ ದೇವಾಯಗಳು ವೈಷ್ಣವ, ಶೈವ, ಜೈನ ಧರ್ಮಕ್ಕೆ ಸೇರಿದವುಗಳಾಗಿದ್ದು

ವಾಸ್ತುಶೈಲಿಯ ದೃಷ್ಟಿಯಿಂದ ನೋಡುವುದಾದರೆ ಈ ತಾಲೂಕಿನಲ್ಲಿ ಮೂಲತಃ ಹೊಯ್ಸಳ ಕಲ್ಯಾಣಿಚಾಲುಕ್ಯ ಶೈಲಿಗಳ ಸ್ಮಾರಕಗಳು ಹೆಚ್ಚಿವೆ.

ದೇವಾಲಯಗಳ ವರ್ಗೀಕರಣದಲ್ಲಿ ಕರ್ನಾಟಕದ ಪಾತ್ರ ಬಲುದೊಡ್ಡದು. ನವಲಗುಂದ ತಾಲ್ಲೂಕಿನಲ್ಲಿ ಜೈನಧರ್ಮ ವ್ಯಾಪಿಸಿದ್ದು ಇಂದಿಗೂ ಅಣ್ಣಿಗೇರಿಯಲ್ಲಿ ಮೂಕ ಸಾಕ್ಷಿಯಾಗಿ ನಿಂತಿದೆ. ಮಹಾವೀರ ತೀರ್ಥಂಕರ ಶಿಲ್ಪಗಳು ಪ್ರಧಾನವಾಗಿ ಇಲ್ಲಿ ಕಂಡುಬರುತ್ತವೆ. ಆ ಕಾಲದಲ್ಲಿ ಅಂದು ಉಪಯೋಗಿಸುತ್ತಿದ್ದ ಸಿದ್ಧ ಉಡುಪುಗಳ ಕೇಶಾಲಾಂಕಾರ, ಒಡವೆಗಳು, ಆಯುಧಗಳು ಇತಿಹಾಸದ ಪಳಯುಳಿಕೆಯಂತಿವೆ. ಈ ತಾಲೂಕಿನ ೫೮ ಹಳ್ಳಿಗಳಲ್ಲಿ ಕೆಲವು ಹಳ್ಳಿಗಳಲ್ಲಿ ಮಾತ್ರ ಕಂಡುಬರುವ ದೇವಾಲಯದ ವಾಸ್ತುಶೈಲಿಯನ್ನು ಗುರುತಿಸುವುದಾದರೆ ಪ್ರತಿಯೊಂದು ಹಳ್ಳಿಯಲ್ಲೂ ಇದ್ದ ದೇವಾಲಯಗಳು ಧಾರ್ಮಿಕತೆಯೊಂದಿಗೆ ಆಗಿನ ಕಾಲದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ವಿದ್ಯಾಮಾನಗಳನ್ನು ಪ್ರತಿಬಿಂಬಿಸುತ್ತದೆ. ಆದಕಾರಣ ದೇವಾಲಯಗಳು ಇತಿಹಾಸದ ಕೊಂಡಿಯಾಗಿ ಮತ್ತು ಇತಿಹಾಸದ ಬೆಳಕು ಚೆಲ್ಲುವ ದೀಪಗಳಾಗಿವೆ.

ಕರ್ನಾಟಕವನ್ನಾಳಿದ ಮೊದಲ ಸಾಮ್ರಾಟರಾದ ಬಾದಾಮಿ ಚಲುಕ್ಯರು ಈ ಪ್ರದೇಶದಲ್ಲಿ ಬಸದಿ ಮತ್ತು ದೇವಾಲಯಗಳನ್ನು ನಿರ್ಮಿಸಿದ ಸೂಚನೆಗಳು ಶಾಸನಗಳಿಂದ ದೊರೆಯುತ್ತವೆ. ಪ್ರಸ್ತುತ ತಾಲೂಕಿನಲ್ಲಿ ಬಾದಾಮಿ ಚಲುಕ್ಯರ ಸ್ಮಾರಕಗಳು ಕಂಡುಬರುವುದಿಲ್ಲ. ಹಾಗೆಂದ ಮಾತ್ರಕ್ಕೆ ಅವು ನಿರ್ಮಾಣಗೊಂಡಿಲ್ಲವೆಂದು ಅರ್ಥವಲ್ಲ. ನಿರ್ಮಾಣಗೊಂಡಿವೆ, ಕಾಲಾಂತರದಲ್ಲಿ ನಾಶವಾಗಿವೆ. ಅಣ್ಣಿಗೇರಿಯ ಕ್ರಿ.ಶ. ೭೫೦-೫೨ ರ ಶಾಸನವು ಎರಡನೆಯ ಕೀರ್ತಿವರ್ಮನ ಆಳ್ವಿಕೆ ಕಾಲದಲ್ಲಿ ಜೇಬುಗಳಗೇರಿಯನ್ನು ಆಳುತ್ತಿದ್ದ ಕಲಿಯಮ್ಮ ಎಂಬುವಳು ಜಿನಮಂದಿರವನ್ನು ಕಟ್ಟಿಸಿದಳೆಂದು ತಿಳಿಸುತ್ತದೆ. (ಸೌ.ಇ.ಇ. xi-i05)

ರಾಷ್ಟ್ರಕೂಟರ ಕಾಲದಲ್ಲಿ ತಾಲೂಕಿನಲ್ಲಿ ವಿವಿದೆಡೆಗಳಲ್ಲಿ ದೇವಾಲಯಗಳು ಮತ್ತು ಬಸದಿಗಳು ನಿರ್ಮಾಣಗೊಂಡಿವೆ. ಅವುಗಳಲ್ಲಿ ಬಹುತೇಕ ಸ್ಮಾರಕಗಳು ಹಾಳಾಗಿವೆ. ಕೆಲವು ಸ್ಮಾರಕಗಳು ಜೀರ್ಣೋದ್ಧಾರಗೊಂಡಿವೆ. ಬೆರಳಣಿಕೆಯಷ್ಟು ಸ್ಮಾರಕಗಳು ಭಗ್ನಗೊಂಡು ಮೂಲಸ್ಥಿತಿಯಲ್ಲಿವೆ. ನವಲಗುಂದ ತಾಲೂಕಿನಲ್ಲಿ ರಾಷ್ಟ್ರಕೂಟರ ೩ ಶಾಸನಗಳು ದೊರತಿವೆ. ಅವು ಮುಖ್ಯವಾಗಿ ದೇವಾಲಯ ಆಗ್ರಹಾರ ಮತ್ತು ಕೆರೆಗಳ ನಿರ್ಮಾಣವನ್ನು ಹಾಗೂ ದಾನದತ್ತಿಗಳನ್ನು ಪ್ರಸ್ತಾಪಿಸಿವೆ. ಎಸ್.ರಾಜಶೇಖರ ಅವರು ಕರ್ನಾಟಕದಲ್ಲಿನ, ರಾಷ್ಟ್ರಕೂಟ ದೇವಾಲಯಗಳನ್ನು ಕುರಿತು ಆಳವಾಗಿ ಅಧ್ಯಯನ ನಡೆಸಿದ್ದಾರೆ. (ರಾಜಶೇಖರ ೧೯೯೧ ಪು. ೨೨) ಕ್ರಿ.ಶ. ೯೪೫ ತುಪ್ಪದಕುರಹಟ್ಟಿಯ ಶಾಸನವು ಗಂಗಭೂತುಗನು ಬೆಳ್ವೊಲ ೩೦೦ ನ್ನು ಆಳುತ್ತಿದ್ದಾಗ, ಆಚಯ್ಯ ಎಂಬುವವನು ಅಚ್ಚೇಶ್ವರ ದೇವಾಲಯವನ್ನು ನಿರ್ಮಿಸಿದನೆಂದು ತಿಳಿಸುತ್ತದೆ. (ಎ.ಇ. ಸಂ. ೧೪, ಪು.ಸಂ. ೩೬೪-೬೬)

ನವಲಗುಂದ ತಾಲ್ಲೂಕಿನಲ್ಲಿ ಪ್ರಮುಖ ಶಿವಾಲಯಗಳಲ್ಲಿ ಅಣ್ಣಿಗೇರಿಯ ಅಮೃತೇಶ್ವರ ದೇವಾಲಯವು ಸುಂದರವಾದ ಕೆತ್ತನೆಗಳಿಂದ ಕೂಡಿದ ಮಹತ್ವದ ಸ್ಮಾರಕವಾಗಿದೆ. ಹೊಯ್ಸಳರು ಸಹ ಈ ಭಾಗದಲ್ಲಿ ತಮ್ಮ ದೇವಾಲಯಗಳನ್ನು ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿಯೇ ನಿರ್ಮಿಸಿದ್ದಾರೆ. ಆದರೆ ಶಿಲ್ಪಗಳು ಮತ್ತು ಕಂಬಗಳು ಹೆಚ್ಚು ಅಲಂಕರಣಗೊಂಡಿವೆ. ನಾವಳ್ಳಿಯ ಕಲ್ಮೇಶ್ವರ ದೇವಾಲಯವು ಹೊಯ್ಸಳರ ನಿರ್ಮಾಣವೆನ್ನಬಹುದು. ದೇವಾಲಯದ ಮುಂಭಾಗದಲ್ಲಿ ಭಗ್ನಗೊಂಡಿರುವ ಹೊಯ್ಸಳ ಲಾಂಛನವಿದೆ.

ತಾಲೂಕಿನಾದ್ಯಂತ ಪ್ರತಿಯೊಂದು ಹಳ್ಳಿಗಳಲ್ಲಿ, ಬಸವೇಶ್ವರ ಕಲ್ಮೇಶ್ವರ ಗುಡಿಗಳು, ಮಾರಿದೇವಾಲಯ, ಬಸದಿಗಳು, ಹನುಮಂತೇಶ್ವರ ದೇವಾಲಯ ಹೀಗೆ ಹಲವಾರು ದೇವಾಲಯಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವು ಹಳ್ಳಿಗಳ ಪ್ರಮುಖ ದೇವಾಯಗಳನ್ನು ಮಾತ್ರ ಇಲ್ಲಿ ಗುರುತಿಸಿ ಅಲ್ಲಿ ಕಂಡುಬರುವ ವಾಸ್ತುಕಲೆ ಶೈಲಿಗಳನ್ನು ದೃಢಪಡಿಸಲಾಗಿದೆ.

**೨. ಶೈವ ದೇವಾಲಯಗಳು**

ನವಲಗುಂದ ತಾಲ್ಲೂಕಿನಲ್ಲಿರುವ ವಿವಿಧ ಕಾಲಮಾನದ ಶೈವ ದೇವಾಲಯಗಳ ವಾಸ್ತು ಲಕ್ಷಣಗಳು ಈ ಕೆಳಗಿನಂತಿವೆ.

| | | |
|---|---|---|
| ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಅಮೃತೇಶ್ವರ |
| ಸ್ಥಳ | : | ಪೇಟೆಯಲ್ಲಿದೆ. |
| ಕಾಲ | : | ಕ್ರಿ.ಶ. ೧೨ ನೆ ಶತಮಾನ |
| ರಾಜವಂಶ/ಮಂಡಳಿಕ | : | ಹೊಯ್ಸಳ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಈ ದೇವಾಲಯವು ಈ ಭಾಗದ ಹೆಸರಾಂತ ಸ್ಮಾರಕವಾಗಿದೆ. ಈಗ ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ಸಂರಕ್ಷಣೆಯಲ್ಲಿದೆ. ಗರ್ಭಗೃಹ, ಅಂತರಾಳ, ನವರಂಗ ಮತ್ತು ಸಭಾಮಂಟಪಗಳನ್ನು ಒಳಗೊಂಡಿದ್ದು. ವೇಸರಶೈಲಿಯಲ್ಲಿದೆ. ಗರ್ಭಗೃಹದ ಬಾಗಿಲು ವಾಡಗಳಲ್ಲಿ ಅರ್ಧಕಂಬ ಮತ್ತು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ ಪಟ್ಟಿಗಳ ಅಲಂಕರಣಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಈ ದ್ವಾರ ಬಂಧನಕ್ಕೆ ಕಲ್ಲಿನ ತೊಲೆಯು ಆಧಾರವಾಗಿದ್ದು, ಇದನ್ನು ಎರಡು ಕಂಬಗಳು ಹೊತ್ತಿವೆ. ಅಂತರಾಳದ ದ್ವಾರವು ಸಪಾಟಾಗಿದ್ದು, ಅರ್ಧಕಬಂಗಳ ಅಲಂಕರಣ ಭಾಗವು ಮೊದಲಿಗೆ ಅರ್ಧಮಂಟಪದವಾಗಿದ್ದು ಅನಂತರ ಕಾಲದಲ್ಲಿ ದ್ವಾರವನ್ನು ಅಳವಡಿಸಿರಬೇಕು. ಎರಡೂ ಇಕ್ಕಲಗಳಲ್ಲಿ ಒರಟು ರಚನೆಯ ಜಾಲಾಧ್ರಂಗಳಿವೆ.

ನವರಂಗಕ್ಕೆ ಪೂರ್ವ ಮತ್ತು ದಕ್ಷಿಣದಲ್ಲಿ ದ್ವಾರಗಳಿವೆ. ಇದು ಪ್ರವೇಶ ಮಂಟಪಗಳನ್ನು ಹೊಂದಿದೆ. ದಕ್ಷಿಣ ದ್ವಾರದ ಪ್ರವೇಶ ಮಂಟಪದ ಮೇಲೆ ಶಿಖರವಿದ್ದು ಇಳಿಜಾರಾದ ಸೂರಿನ ಅಲಂಕರಣವಿದೆ. ನವರಂಗ ನಡುವಿನ ಕಂಬಗಳು ಚೌಕ ಮತ್ತು ಪಟ್ಟಿಗಳ ಅಲಂಕರಣದಿಂದ ಕೂಡಿವೆ. ಈ ಪಟ್ಟಿಗಳ ಸುತ್ತಲೂ ಲತಾ ಪಟ್ಟಿಕೆಯ ಅಲಂಕರಣವಿದೆ. ಭುವನೇಶ್ವರಿಯಲ್ಲಿ ತಾವರೆಯ ಉಬ್ಬುರಚನೆಯಿದೆ. ಪೂರ್ವದ್ವಾರದಲ್ಲಿ ಅರ್ಧಕಂಬದಲ್ಲಿ ಅರ್ಧಕಂಬಗಳು ಮತ್ತು ಸೂಕ್ಷ್ಮಕೆತ್ತನೆಗಳಿಂದ ಕೂಡಿದ ಪಟ್ಟಿಗಳ ಅಲಂಕರಣಗಳಿವೆ. ಈ ಅಪೂರ್ವ ಕೆತ್ತನೆಗಳು ಭಗ್ನಗೊಂಡಿವೆ. ದ್ವಾರದ ತಳ ಭಾಗದಲ್ಲಿ ದ್ವಾರಪಾಲಕರು ಮತ್ತು ಸ್ತ್ರೀಯರ ಶಿಲ್ಪಗಳಿದ್ದು, ವಿವಿಧ ಭಂಗಿಯಲ್ಲಿವೆ.

ಪೂರ್ವದ್ವಾರದ ಪ್ರವೇಶ ಮಂಟಪವು ಮೊದಲಿಗೆ ದಕ್ಷಿಣ, ಉತ್ತರ ಮತ್ತು ಪೂರ್ವಗಳಿಂದ ಪ್ರವೇಶವನ್ನು ಹೊಂದಿತ್ತದೆ. ಆದರೆ ನಂತರದ ಕಾಲದಲ್ಲಿ ದಕ್ಷಿಣ ಮತ್ತು ಉತ್ತರದ ಪ್ರವೇಶಗಳನ್ನು ಸೇರಿಸಿಕೊಂಡು ಭಿತ್ತಿ ನಿರ್ಮಿಸಲಾಗಿದೆ. ಈ ಪ್ರವೇಶ ಮಂಟಪಕ್ಕೆ ಹೊಂದಿಕೊಂಡಂತೆ ಸಭಾಮಂಟಪವಿದ್ದು ಇದು ನಕ್ಷತ್ರಾಕಾರದಲ್ಲಿದೆ. ಇದು ಪೂರ್ವ ದಕ್ಷಿಣ ಮತ್ತು ಉತ್ತರಗಳಿಂದ ಪ್ರವೇಶವನ್ನು ಹೊಂದಿದೆ. ಸಭಾಮಂಟಪವು ತೆರೆದ ಸ್ಥಿತಿಯಲ್ಲಿದ್ದು, ನಂತರ ಭಿತ್ತಿಯನ್ನು ನಿರ್ಮಿಸಿ ಮೂರು ದಿಕ್ಕುಗಳಲ್ಲಿ ದ್ವಾರಗಳನ್ನು ಅಳವಡಿಸಲಾಗಿದೆ. ಈ ದ್ವಾರಗಳು ಸೂಕ್ಷ್ಮಕೆತ್ತನೆಗಳ ಅಲಂಕರಣದಿಂದ ಕೂಡಿದೆ. ಈ ಗೋಡೆ ನಿರ್ಮಾಣದ ಸಮಯದಲ್ಲಿ ಕಟ್ಟಡದ ಮೇಲೆ ನಿರ್ಮಿಸಿದ ಕೈಪಿಡಿ ಗೋಡೆಯಲ್ಲಿಕೆಲವು ಶಿಲ್ಪಾವಶೇಷಗಳನ್ನು ಅಳವಡಿಸಲಾಗಿದೆ.

ಅಧಿಷ್ಠಾನದ ಮೇಲಿರುವ ದೇವಾಲಯದ ಹೊರಭಿತ್ತಿಯಲ್ಲಿ ಗೋಡೆಗಂಬ, ಅರ್ಧಕಂಬ ಮತ್ತು ದೇವಾಕೋಷ್ಠಗಳ ರಚನೆಗಳಿವೆ. ಗರ್ಭಗೃಹದ ಮೇಲೆ ತ್ರಿತಲ ಶಿಖರವಿದ್ದು, ಸುಖನಾಸಿಯನ್ನು ಹೊಂದಿದೆ. ಶಿಖರದ ಮೇಲಿರುವ ಸ್ತೂಪಿ ಗಾರೆಯಿಂದ ದುರಸ್ತಿಗೊಳಿಸಿರುವುದು ತಿಳಿದುಬರುತ್ತದೆ. ತುದಿಯಲ್ಲಿ ಕಳಸವನ್ನು ಅಳವಡಿಸಲಾಗಿದೆ. ಕೈಪಿಡಿಗೋಡೆಯಲ್ಲಿ ವಿವಿಧ ಶಿಲ್ಪಗಳ ಅಲಂಕರಣಗಳಿವೆ. ದೇವಾಲಯದ ಸುತ್ತಲಿರುವ ಗಿಡ್ಡನೆಯ ಪ್ರಕಾರಗೋಡೆ ಜೀರ್ಣೋದ್ಧಾರಗೊಳ್ಳುತ್ತಿದೆ. ಅಲ್ಲಲ್ಲಿ ವಾಸ್ತು ಅವಶೇಷಗಳು ಮತ್ತು ಭಗ್ನಶಿಲ್ಪಾವಶೇಷಗಳು ಬಿದ್ದಿವೆ. ಮಂಟಪವೊಂದು ನೈರುತ್ಯ ಮಾಲೆಯಲ್ಲಿದೆ. ದೇವಾಲಯದ ಮಹಾದ್ವಾರ ಮಂಟಪವು ಸುಂದರವಾದ ದುಂಡನೆಯ ಕಂಬಗಳಿಂದ ನಿರ್ಮಾಣವಾಗಿದೆ. ನವರಂಗದಲ್ಲಿ ಪೂಜೆಗೊಳ್ಳುತ್ತಿರುವ ಅಮೃತೇಶ್ವರಲಿಂಗ ನಿಜಕ್ಕೂ ಆಕರ್ಷಕವಾಗಿದೆ. ನವರಂಗದಲ್ಲಿ ಭಗ್ನಲಿಂಗಗಳಿವೆ ಸಭಾಮಂಟಪದಲ್ಲಿ ನಂದಿಶಿಲ್ಪವಿದೆ. ಹೊರಭಾಗದಲ್ಲಿ ಸಳನ ಮತ್ತು ಸಿಂಹದ ಭಗ್ನಶಿಲ್ಪ, ನಂದಿ, ನಾಗರಾಜ, ಭೈರವಿ ಮತ್ತು ನಾಗಪ್ರತಿಮೆಗಳಿವೆ.

ಅಣ್ಣಿಗೇರಿಯ ಹೆಚ್ಚಿನ ಶಾಸನಗಳು ಅಮೃತೇಶ್ವರ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿರುವುದನ್ನು ಉಲ್ಲೇಖಿಸುತ್ತವೆ. ಹೆಚ್ಚಾಗಿ ಹೊಯ್ಸಳ ಅಧಿಕಾರಿಗಳು ಈ ದಾನದತ್ತಿಗಳನ್ನು ನೀಡಿದ್ದಾರೆ. ಕಾರಣ ಈ ದೇವಾಲಯವನ್ನು ಹೊಯ್ಸಳರು ನಿರ್ಮಿಸಿರುವುದು. ಹೊಯ್ಸಳ ಅಧಿಕಾರಿಗಳು ಅಮೃತೇಶ್ವರ ದೇವರಿಗೆ ಭೂದಾನ ಸುವರ್ಣದಾನ, ದಾನ್ಯದಾನ ದಾನಗಳನ್ನು ನೀಡಿದ ಉಲ್ಲೇಖಗಳಿವೆ. ಅಲ್ಲದೇ ಕಳಚೂರಿ, ಮತ್ತು ಸೇವುಣರ ಮನೆತನಗಳ ಅಧಿಕಾರಿಗಳು ಸಹ ದಾನದತ್ತಿಗಳನ್ನು ನೀಡಿದ್ದಾರೆ. ಕ್ರಿ.ಶ. ೧೫೩೯ ರ ಅಚ್ಚುತರಾಯನ ಶಾಸನವು ಇಲ್ಲಿನ ಬ್ರಾಹ್ಮಣರಿರಗೆ ನೀಡಿದ ಆನಂದನಿಧಿ ದಾನವನ್ನು ಕುರಿತು ತಿಳಿಸುತ್ತದೆ. (S.II. xx: 1001111-11213,126, 217, 224)

ದೇವಾಲಯದ ಮುಂಭಾಗದಲ್ಲಿ ೧೫ ನೇ ಶತಮಾನದ ಐದು ಶಾಸನಗಳಿವೆ. ಸಭಾಮಂಟಪದ ಬಸವೇಶ್ವರ ಮೂರ್ತಿಯ ಎಡಭಾಗದದ ಗೋಡೆಯಲ್ಲಿ ಶಾಸನ ಇದೆ. ಕಂಬಗಳಲ್ಲಿ ಅಲ್ಲಲ್ಲಿ ಶಾಸನಗಳಿವೆ. ದೇವಾಲಯದ ಮುಂಭಾಗದಲ್ಲಿ ಮುಖ ಮಂಟಪವಿದೆ.

| | | |
|---|---|---|
| ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಕಲ್ಲುಮಠ |
| ಸ್ಥಳ | : | ಹೊಸಪೇಟೆ ಓಣಿಯಲ್ಲಿದೆ. |
| ಕಾಲ | : | ಕ್ರಿ.ಶ. ೧೧ ಮತ್ತು ೧೨ ನೆ ಶತಮಾನ |
| ರಾಜವಂಶ/ಮಂಡಳಿಕ | : | ಕಲ್ಯಾಣ ಚಾಲುಕ್ಯ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಈ ದೇವಾಲಯವು ಗರ್ಭಗೃಹ, ಅಂತರಾಳಮತ್ತು ನವರಂಗಗಳಿಂದ ಕೂಡಿದ ತ್ರಿಕೂಟಾಚಲ ದೇವಾಲಯವಾಗಿದೆ. ನವರಂಗದ ದಕ್ಷಿಣ ಮತ್ತು ಉತ್ತರದಲ್ಲಿ ದ್ವಾರಗಳಿವೆ. ಕೊರಡಿ ಭಾಗಗಳು ಕಾಣಬರುವುದಿಲ್ಲ. ಗರ್ಭಗೃಹದ ಬಾಗಿಲುವಾಡಗಳು ಅರ್ಧಕಂಬಗಳ ಅಲಂಕರಣದಿಂದ ಕೂಡಿವೆ. ಲಾಲಾಟಬಿಂಬ ಸಪಾಟಾಗಿದ್ದು, ಮೇಲಿನ ಫಲಕದಲ್ಲಿ ನಾಗರ ಮತ್ತು ದ್ರಾವಿಡ ಶೈಲಿಯ ಶಿಖರಗಳ ಪ್ರತಿರೂಪಗಳನ್ನು ಬಿಡಿಸಲಾಗಿದೆ. ಅಂತರಾಳ ದ್ವಾರದ ಇಕ್ಕೆಲಗಳಲ್ಲಿ ಜಾಲಾಂಧ್ರಗಳಿವೆ. ಲಲಾಟಬಿಂಬ ಸಪಾಟಾಗಿದೆ. ನವರಂಗದಲ್ಲಿ ತಿರುಗಣೆ ಯಂತ್ರದಿಂದ ಕಡೆದ ದುಂಡನೆಯ ಕಂಬಗಳಿವೆ. ನವರಂಗದ ದಕ್ಷಿಣದ್ವಾರದಲ್ಲಿ ಜಾಲಾಂಧ್ರಗಳಿವೆ. ಉತ್ತರದ್ವಾರದ ಜಾಲಾಂಧ್ರಗಳು ಕಣ್ಮರೆಯಾಗಿವೆ. ಹೀಗಾಗಿ ಇದು ತ್ರಿಕೂಟ ದೇವಾಲಯವಾಗಿರುವ ಸೂಚನೆಗಳು ದೊರೆಯುತ್ತವೆ. ನವರಂಗದಲ್ಲಿ ಎಂಟು ದೇವಕೋಟಷ್ಠಗಳಿದ್ದು, ಅವುಗಳ ಮೇಲ್ಭಾಗದಲ್ಲಿ ಶಿಖರಗಳ ರಚನೆಯ ಅಲಂಕರಣವಿದೆ. ತೊಲೆಗಳ ಮೇಲೆ ನೃತ್ಯಗಾರರ ಮತ್ತು ಸಂಗೀತಗಾರರ ಉಬ್ಬುಶಿಲ್ಪಗಳಿವೆ ಇವು ನವರಂಗದ ಅಲಂಕರಣವನ್ನು ಹೆಚ್ಚಿಸಿವೆ. ಮಧ್ಯದ ವೇದಿಕೆಯು ಚೌಕ ಮತ್ತು ವೃತ್ತದ ರಚನೆಯಲ್ಲಿದೆ. ದೇವಾಲಯದ ಹೊರಗೋಡೆಯನ್ನು ದಿಂಡುಗಲ್ಲಿನಿಂದ ಜೀರ್ಣೋದ್ಧಾರ ಮಾಡಲಾಗಿದೆ. ಹೊರಭಾಗದಲ್ಲಿ ಕಕ್ಷಾಸನದಭಾಗಗಳು ಬಿದ್ದಿದ್ದು, ರಂಗ ಮಂಟಪವಿದ್ದ ಸೂಚನೆಗಳು ದೊರೆಯುತ್ತವೆ.

ಗರ್ಭಗೃಹದಲ್ಲಿ ಲಿಂಗವಿದ್ದು, ಪೂಜೆಗೊಳ್ಳುತ್ತಿದೆ. ಈ ದೇವಾಲಯದ ಎದುರು ವರಕೆ ಬಸವೇಶ್ವರ ಎಂಬ ದೇವಾಲಯವಿದೆ. ಇದರಲ್ಲಿ ಬೃಹತ್ ನಂದಿಶಿಲ್ಪವಿದೆ.ಇದು ಮೂಲತಃ ತ್ರಿಕೂಟ ದೇವಾಲಯಕ್ಕೆ ಸೇರಿದ ಶಿಲ್ಪವಾಗಿದೆ. ಈ ಶಿಲ್ಪವು ಸುಮಾರು ೧೦ ಅಡಿ ಎತ್ತರವಿದ್ದು ೧೨ ಅಡಿ ಉದ್ದವಿದೆ, ಶಿಲ್ಪವು ಭಗ್ನಗೊಂಡಿದೆ ೧೯೬೨ ರಲ್ಲಿ ಹಳೆಯ ಮಣ್ಣಿನ ದೇವಾಲಯವನ್ನು ಕೆಡವಿ, ಈಗಿನ ಮಾಳಿಗೆ ಶೈಲಿಯ ದೇವಾಲಯವನ್ನು ನಿರ್ಮಿಸಲಾಗಿದೆ. ಮುಂಭಾಗದಲ್ಲಿ ನಾಗ, ಗಣೇಶ, ಸಂಗೀತಗಾರರು, ನೃತ್ಯಗಾರರು, ಮತ್ತು ಶಿಲ್ಪಗಳು ಕಂಡುಬರುತ್ತವೆ. ಇವೆಲ್ಲವು ಮೇಲೆ ಹೇಳಿದ ತ್ರಿಕೂಟ ಶಿವಾಲಯಕ್ಕೆ ಸಂಬಂಧಿಸಿವೆ.

| | | | |
|---|---|---|---|
| ೩. | ಗ್ರಾಮ | : | ಅಣ್ಣಿಗೇರಿ |
| | ಹೆಸರು | : | ಪವಾಡ ಬಸವಣ್ಣ |
| | ಸ್ಥಳ | : | ಹೊರಕೇರಿಯಲ್ಲಿದೆ. |

| | | |
|---|---|---|
| ಕಾಲ | : | ಕ್ರಿ.ಶ. ೧೨ ನೆ ಶತಮಾನ |
| ರಾಜವಂಶ/ಮಂಡಳಿಕ | : | ಕಲ್ಯಾಣ ಚಾಲುಕ್ಯ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಈ ದೇವಾಲಯವು ನೆಲಸಮಗೊಂಡಿದ್ದು ತಲರಚನೆ ಕಂಡುಬರುತ್ತದೆ. ಇಲ್ಲಿರುವ ನಂದಿ ಮತ್ತಿತರ ಶಿಲ್ಪಾವಶೇಷಗಳು ಕಲ್ಯಾಣರ ಚಾಲುಕ್ಯ ಶೈಲಿಯಲ್ಲಿವೆ. ಜಲಹರಿ, ಮತ್ತಿತರ ವಾಸ್ತು ಅವಶೇಷಗಳನ್ನು ಇಲ್ಲಿ ಕಾಣಬಹುದು. ಮುಂಭಾಗದಲ್ಲಿರುವ ಕಲಚೂರಿ ಸೋವಿದೇವನ ಕ್ರಿ.ಶ. ೧೧೭೩ ರ ಶಾಸನವು ನಾಗ ಗಾವುಂಡನ ನಾಗೇಶ್ವರ ದೇವಾಲಯವನ್ನು ನಿರ್ಮಿಸಿ ಭೂದಾನ ಮಾಡಿದನೆಂದು ತಿಳಿಸುತ್ತದೆ. (ಸೌ.ಇ.ಇ. XX : ೧೨೨) ಇದರಿಂದ ಅಳಿದು ಹೋಗಿರುವ ದೇವಾಲಯವು ನಾಗೇಶ್ವರ ದೇವಾಲಯವೆಂದು ಸ್ಪಷ್ಟವಾಗುವುದಲ್ಲದೆ, ಮೇಲಿನ ನಂದಿ ಮತ್ತಿತರ ಶಿಲ್ಪಾವಶೇಷಗಳು ನಾಗೇಶ್ವರ ದೇವಾಲಯಕ್ಕೆ ಸಂಬಂಧಿಸಿರುವುದು ಗಮನಾರ್ಹವಾಗಿದೆ.

| | | |
|---|---|---|
| ೪.ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಉಮಾಪಾರ್ವತಿಗುಡಿ ದೇವಾಲಯ |
| ಸ್ಥಳ | : | ಹಳೇ ಅಮೃತೇಶ್ವರ ನಗರದಲ್ಲಿದೆ. |
| ಕಾಲ | : | ಕ್ರಿ.ಶ. ೧೨ ನೆ ಶತಮಾನ |
| ರಾಜವಂಶ/ಮಂಡಳಿಕ | : | ಕಲಚೂರಿ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

(ಪ್ರಕಟಣೆ ಸಿ.ಮಹಾದೇವ ೨೦೦೬, ಪು. ೧೧೮)

ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಈ ಸ್ಮಾರಗಳು ಕ್ರಿ.ಶ. ೧೯೦೩ ಮತ್ತು ೧೯೧೮ ರಲ್ಲಿ ಜೀರ್ಣೋದ್ಧಾರಗೊಂಡಿದೆ. ಸಭಾಮಂಟಪದಲ್ಲಿ ದುಂಡಾದ ಕಂಬಗಳು ಮತ್ತು ಅಲಂಕೃತ ಬೋದಿಗೆಗಳನ್ನು ಕಾಣಬಹುದು. ಮುಂದಿರುವ ಕಮಾನುದ್ವಾರ ಆಕರ್ಷಕವಾಗಿದ್ದು, ಮೇಲೆ ಕಮಾನುಗೊಂಡಗಳ ಅಲಂಕರಣವಿದೆ. ಗರ್ಭಗೃಹದಲ್ಲಿರುವ ದೇವಿಯ ಶಿಲ್ಪವು ಕೈಗಳಲ್ಲಿ ತ್ರಿಶೂಲ ಡಮರು, ಶಂಖ ಮತ್ತು ಅಭಯ ಹಸ್ತವನ್ನು ಹೊಂದಿದೆ. ಪಾಣಿ ಪೀಠದಲ್ಲಿಸಿಂಹಲಾಂಛನವಿದೆ. ಸಭಾಮಂಟಪದಲ್ಲಿ ನಾಗ ಮತ್ತು ಸಪ್ತಮಾತೃಕೆಯರ ಭಗ್ನಶಿಲ್ಪಗಳಿವೆ.

ಗರ್ಭಗೃಹವನ್ನು ವೀರವಕೋ ಚೆನ್ನಪ್ಪ, ಬೆಳ್ಳೂಳ್ಳಿ ಅವರು ಮತ್ತು ಸಭಾಮಂಟಪವನ್ನು ತಿರಕಂಭಟ್ಟ ಅಮೃತಭಟ್ಟಪುಳಿಗಿ ಅವರು ನಿರ್ಮಿಸಿದ್ದಾರೆ. ಈ ಊರಿನ ಗುಲ್ಲಿಕೇರಿ ಬಸವಣ್ಣನ ಗುಡಿ ಎದುರಿನಲ್ಲಿರುವ ಕ್ರಿ.ಶ. ೧೧೬೨ ಕಲಚೂರಿ ಬಿಜ್ಜಳನ ಶಾಸನವು ಅಣ್ಣಿಗೇರಿ ಚಂಡಿಕಾದೇವಿಗೆ ಶ್ರೀಧರಯ್ಯ ದಂಡನಾಯಕ ಭೂದಾನ

ಮಾಡಿದ್ದನ್ನು ಉಲ್ಲೇಖಿಸುತ್ತದೆ. (S.I.I. vxv : 102) ಪ್ರಸ್ತುತ ದೇವಾಲಯದ ಸಭಾಮಂಟಪದಲ್ಲಿರುವ ಹಳೆಯ ದೇವಿ ಶಿಲ್ಪವೇ ಬಹುಶಃ ಶಾಸನದಲ್ಲಿ ಉಲ್ಲೇಖಿಗೊಂಡಿರುವ ಚಂಡಿಕಾದೇವಿಯ ಶಿಲ್ಪವಾಗಿರಬಹುದು.

| | | |
|---|---|---|
| ೫. ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಪುರದವೀರಭದ್ರೇಶ್ವರ ದೇಗುಲ |
| ಸ್ಥಳ | : | ಪುರಸಭೆ ಹಿಂಬಾಗದಲ್ಲಿದೆ. |
| ಕಾಲ | : | ಕ್ರಿ.ಶ. ೧೧, ೧೨ ನೆ ಶತಮಾನ |
| ರಾರಜವಂಶ/ಮಂಡಳಿಕ | : | ಕದಂಬ ನಾಗರ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಈ ದೇವಾಲಯವು ಗರ್ಭಗೃಹ ಅಂತರಾಳ, ನವರಂಗ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದ ದ್ವಾರವು ಅರ್ಧಕಂಬಗಳ ಅಲಂಕರಣೆ ಹೊಂದಿದ್ದು, ಸರಳ ರಚನೆಯಾಗಿವೆ. ಅಂತರಾಳದ ದ್ವಾರವನ್ನು ಕಲ್ಯಾಣದ ಚಾಲುಕ್ಯರ ಶೈಲಿಯಲ್ಲಿ ನಿರ್ಮಿಸಲಾಗಿದೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಚೌಕರಚನೆಯಲ್ಲಿದ್ದು ಇವುಗಳ ಮುಖಭಾಗಗಳಲ್ಲಿ ಕಳಸಗಳ ಅಲಂಕರಣವಿದೆ. ನವರಂಗದ ಉತ್ತರ ಮತ್ತು ಪೂರ್ವದಿಕ್ಕುಗಳಲ್ಲಿ ಪ್ರದೇಶ ದ್ವಾರಗಳಿವೆ. ಅಧಿಷ್ಠಾನದ ಮೇಲಿರುವ ಹೊರಭಿತ್ತಿ ಸರಳ ರಚನೆಯಾಗಿದೆ. ಕೈಪಿಡಿಯಲ್ಲಿ ಶಿಲ್ಪ ಫಲಕಗಳ ಅಳವಡಿಕೆಯನ್ನು ಕಾಣಬಹುದು. ನವರಂಗದ ಪೂರ್ವದ್ವಾರವು ಸಹಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ಲಲಾಟಬಿಂಬದಲ್ಲಿ ಗಣಪತಿಯ ಉಬ್ಬುಶಿಲ್ಪ ಇದೆ. ಭುವನೇಶ್ವರಿಯಲ್ಲಿ ಕಮಲದ ಮೊಗ್ಗಿನ ಅಲಂಕರಣವಿದೆ. ಸಭಾಮಂಟಪ ಗೋಡೆಗಳನ್ನು ದೊಡ್ಡಗಾತ್ರದ ಕಲ್ಲುಗಳನ್ನು ಬಳಸಿ ನಿರ್ಮಿಸಿದ್ದಾರೆ. ಆದರೆ ಚಾವಣಿಯಲ್ಲಿ ಇತ್ತೀಚೆಗೆ ಜಿಂಕ್‌ಶೀಟ್‌ನ್ನು ಬಳಸಲಾಗಿದೆ. ಹಾಗಾಗಿ ಸ್ಥಳೀಯ ಶೈಲಿಯಲ್ಲಿರುವ ಸಭಾಮಂಟಪವು ಕೆಲವು ದಶಕಗಳ ಹಿಂದಿನ ನಿರ್ಮಾಣವೆನ್ನಬಹುದು. ಗರ್ಭಗೃಹದ ಮೇಲೆ ಕದಂಬ ನಾಗರ ಶೈಲಿಯ ಶಿಖರವಿದೆ.

ಹೊರಭಾಗದಲ್ಲಿರುವ ಕ್ರಿ.ಶ. ೧೦೭೫ ೭೬ರ ಶಾಸನವು ಅಣ್ಣಿಗೇರಿಯಲ್ಲಿ ಬಿಟ್ಟ ಭೂದಾನವನ್ನು ಉಲ್ಲೇಖಿಸುತ್ತದೆ. (S.I.I.xi-i : 115) ನಾಲ್ಕನೆಯ ಸೋಮೇಶ್ವರನ ಕ್ರಿ.ಶ. ೧೧೮೪ರ ಶಾಸನವು ವೀರಬೊಮ್ಮರಸ ದಂಡನಾಯಕನು ಅಣ್ಣಿಗೇರೆಯ ಬೊಮ್ಮೇಶ್ವರ ದೇವಾಲಯ ಹಾಗೂ ಮಹೇಶ್ವರ ಸತ್ರಕ್ಕಾಗಿ ವೀರಗೊಗ್ಗಿ ದೇವರಸ ಎಂಬುವವನಿಗೆ ಭೂದಾನ ಮಾಡಿದನೆಂದು ತಿಳಿಸುವುದು (S.I.I.xi-i : 59) ಮತ್ತೊಂದು ಶಾಸನ ಕಲಚೂರಿ ಸೋಮದೇವನ ಕಾಲಕ್ಕೆ ಸೇರಿದ್ದು, ಇಬ್ಬರು ವ್ಯಕ್ತಿಗಳನ್ನು ಉಲ್ಲೆಖಿಸುತ್ತದೆ. (S.I.I.xv : 130) ಈ ಮೇಲಿನ ಶಾಸನಗಳಿಂದ ಪ್ರಸ್ತುತ ದೇವಾಲಯವು ಮೂಲತಃ ಬೋಮ್ಮೇಶ್ವರ ದೇವಾಲಯವಾಗಿದ್ದು ವಿಜಯನಗರೋತ್ತರ ಕಾಲಕ್ಕೆ ವೀರಭದ್ರನ ದೇವಾಲಯವಾಗಿ ಮಾರ್ಪಾಡಾಗಿರುವಂತೆ ತೋರುತ್ತದೆ.

ಭಿತ್ತಿಯ ಹೊರ ಭಾಗದಲ್ಲಿ ಕೆಲವು ವಿಶಿಷ್ಟ ಶೈಲಿಯ ಶಿಲ್ಪಗಳಿವೆ. ಕುದುರೆ ದೇಹ ಮನುಷ್ಯ ತಲೆ, ಲಿಂಗವನ್ನು ಪೂಜಿಸುತ್ತಿರುವ ದೃಶ್ಯ ಪಂಚತಂತ್ರಕಥೆಗೆ ಸಮೀಪವಾಗಿರುವ ಹಂಸದ ದೃಶ್ಯ, ಸಪ್ತಮಾತ್ರಿಕೆಯ ಶೈಲಿ ಇರುವ ಐದು ಮೂರ್ತಿಗಳ ಶಿಲ್ಪ, ನಾಲ್ಕು ತಲೆ ಹೊಂದಿರುವ ಬ್ರಹ್ಮನ ಶಿಲ್ಪ ಅಲ್ಲಲ್ಲಿ ಕಮಲದಶಿಲ್ಪ ಸುಮಾರು ೧೫ ಬಗೆಯ ಮಿಥುನಶಿಲ್ಪ ಇತ್ಯಾದಿಗಳನ್ನು ಕಾಣಬಹುದು.

| | | |
|---|---|---|
| ೬. ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಬನಶಂಕರಿ ದೇವಾಲಯ |
| ಸ್ಥಳ | : | ಕುರುಬಗೇರಿಯಲ್ಲಿದೆ. |
| ಕಾಲ | : | ಕ್ರಿ.ಶ. ೧೧ ಮತ್ತು ೧೨ ನೆ ಶತಮಾನ |
| ರಾಜವಂಶ/ಮಂಡಳಿಕ | : | ಕಲ್ಯಾಣ ಚಾಲುಕ್ಯ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಈ ದೇವಾಲಯವು ತ್ರಿಕೂಟ ರಚನೆಯಾದ್ದಾಗಿದೆ. ಗರ್ಭಗೃಹದ ಅಂತರಾಳಮತ್ತು ನವರಂಗಗಳಿವೆ. ಉಳಿದರೆಡು ಗರ್ಭಗೃಹಗಳು ನವರಂಗಕ್ಕೆ ಹೊಂದಿಕೊಂಡಂತೆ ಉತ್ತರ ಮತ್ತು ದಕ್ಷಿಣಭಾಗಗಳಲ್ಲಿ ನಿರ್ಮಾಣಗೊಂಡಿವೆ. ಅಂತರಾಳದ ದ್ವಾರದ ಮೇಲೆ ಮಕರ ತೋರಣವಿದ್ದು ನಡುವೆ ಬ್ರಹ್ಮ ಮಹೇಶ್ವರ ಮತ್ತು ವಿಷ್ಣುವಿನ ಉಬ್ಬುಶಿಲ್ಪಗಳಿವೆ. ದ್ವಾರದ ಇಕ್ಕೆಲಗಳಲ್ಲಿಸುಂದರವಾದ ಜಾಲಂಧ್ರಗಳಿವೆ. ನವರಂಗದಲ್ಲಿರುವ ದೇವಕೋಷ್ಠಗಳಮೇಲೆ ದ್ರಾವಿಡಶೈಲಿಯ ಶಿಖರಗಳ ಅಲಂಕರಣಗಳಿವೆ. ನಡುವಿನ ನಾಲ್ಕು ಕಂಬಗಳು ತಿರುಗಣೆಯಂತ್ರದಿಂದ ಕಡೆದ ದುಂಡನೆಯ ಆಕಾರದಲ್ಲಿವೆ. ಭುವನೇಶ್ವರಿಭಾಗ ಸಪಾಟಾಗಿದೆ. ನವರಂಗದ ಪೂರ್ವಗೋಡೆ ಮತ್ತು ದ್ವಾರ ಬಿದ್ದುಹೋಗಿದೆ. ಅದಿಷ್ಟಾನ ಭಗ್ನಗೊಂಡಿದ್ದು ಹೊರಭಿತ್ತಿ ಬಿದ್ದುಹೋಗಿದೆ. ಗರ್ಭಗೃಹದ ಮೇಲೆ ಮೆಟ್ಟಿಲುಕಾರದ ಸಿಮೆಂಟಿನ ಕುಬ್ಜಶಿಖರಗಳನ್ನು ನಿರ್ಮಿಸಿದ್ದಾರೆ.

ಮುಖ್ಯ ಗರ್ಭಗೃಹದಲ್ಲಿ ಲಿಂಗದ ಬ್ರಹ್ಮಭಾಗದ ಮೇಲೆ ಪಾಣಿಪೀಠವಿದೆ. ಅದರ ಮೇಲೆ ನಂತರದ ಕಾಲದ ಭೈರವಿ ಶಿಲ್ಪವನ್ನಿಡಲಾಗಿದೆ. ದೇವಿ, ತ್ರಿಶೂಲ, ಖಡ್ಗ, ಡಮರು ಮತ್ತು ಬಟ್ಟಲನ್ನು ಹಿಡಿದ್ದಾಳೆ. ದಕ್ಷಿಣದ ಗರ್ಭಗೃಹದಲ್ಲಿ ಲಿಂಗವನ್ನು ಹಾಗೂ ಉತ್ತರದ ಗರ್ಭಗೃಹದಲ್ಲಿ ಲಿಂಗದ ಬ್ರಹ್ಮಭಾಗವನ್ನು ಕಾಣಬಹುದು. ಈ ವಿವರಗಳಿಂದ ಈ ದೇವಾಲಯವು ಮೂಲತಃ ಶಿವಾಲಯವಾಗಿತ್ತೆಂದು ಸ್ಪಷ್ಟವಾಗುವುದು. ಅಲ್ಲಿರುವ ಭೈರವಿ ಶಿಲ್ಪದಿಂದಾಗಿ ಈ ದೇವಾಲಯವನ್ನು ಬನಶಂಕರಿದೇವಾಲಯವೆಂದು ಕರೆಯಲಾಗಿದೆ.

ಗುಡಿ ಎದುರು ಕಂಬದ ಮೇಲೆ ಬಾದಾಮಿ ಚಲುಕ್ಯರ ಇಮ್ಮಡಿ ಕೀರ್ತಿವರ್ಮನ ಕ್ರಿ.ಶ. ೭೫೦-೫೭ ರ ಶಾಸನವಿದೆ. ಇದಲ್ಲಿ ಕಲಿಯಮ್ಮ ಎಂಬುವವನು ಜೇಬುಳಗೇರಿಯನ್ನಾಳುವಾಗ ಚೇದಿಯನ್ನು (ಜೈನಮಂದಿರ:)

ಕಟ್ಟಿಸಿದ ಉಲ್ಲೆಖವಿದೆ. (ಸೌ.ಇ.ಇ. xi-i:25) ಇಲ್ಲಿನ ಕ್ರಿ.ಶ. ೧೧೮೬-೮೮ ರ ಶಾಸನವು ಬೆಳ್ವಲನಾಡಿನ ಪೇರ್ಗಡೆ ದಂಡನಾಯಕ ಕೇಶವ ಭಟ್ಟಯ್ಯನು ಅಣ್ಣಿಗೇರಿಯ ಐದು ಬ್ರಹ್ಮಪುರಿಗಳನ್ನು ಬ್ರಾಹ್ಮಣರಿಗೆ

ದಾನಮಾಡಿದನೆಂದಿದೆ (ಸೌ.ಇ.ಇ. xv : 72) ಅಣ್ಣಿಗೇರಿಯು ೧೨ ನೆ ಶತಮಾನದಲ್ಲೇ ದೊಡ್ಡ ಪಟ್ಟಣವಾಗಿದ್ದು ಐದು ಬ್ರಹ್ಮಪುರಿಗಳನ್ನು ಒಳಗೊಂಡಿದ್ದುದು ಗಮನಾರ್ಹ ಸಂಗತಿಯಾಗಿದೆ.

| | | |
|---|---|---|
| ೭. ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಹನುಮಂತದೇವರ ಗುಡಿ |
| ಸ್ಥಳ | : | ಕುರುಬರ ಓಣಿಯಲ್ಲಿದೆ |
| ಕಾಲ | : | ಕ್ರಿ.ಶ. ೧೨ ಮತ್ತು ೧೩ ನೆ ಶತಮಾನ |
| ರಾಜವಂಶ/ಮಂಡಳಿಕ | : | ವಿಜಯನಗರೋತ್ತರ |
| ದಿಕ್ಕು | : | ಪೂರ್ವಾಭಿಮುಖ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಈ ದೇವಾಲಯವು ಮಾಳಿಗೆಶೈಲಿಯಲ್ಲಿದ್ದು, ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಹಳೇ ದೇಗುಲವನ್ನು ಸಂಪೂರ್ಣವಾಗಿ ಕೆಡವಿ ಹೊಸಕಟ್ಟಡವನ್ನು ನಿರ್ಮಿಸುತ್ತಿದ್ದಾರೆ. ಗರ್ಭಗೃಹದಲ್ಲಿ ಸುಮಾರು ಏಳುಅಡಿ ಎತ್ತರದ ಆಂಜನೇಯನ ಶಿಲ್ಪವಿದೆ. ಹೊರಭಾಗಗಳಲ್ಲಿ ಗರುರಡಲಾಂಛನದ ಪಾಣಿಪೀಠದ ಮೇಲಿರುವ ವಿಷ್ಣುವಿನ ಶಿಲ್ಪ ಸಪ್ತಮಾತೃಕೆಯರು ಪದ್ಮಾಸನದಲ್ಲಿ ಕುಳಿತ ಆಭರಣಗಳ ಅಲಂಕಾರವಿದೆ. ದೇವಾಲಯದ ಪ್ರವೇಶದ್ವಾರದಲ್ಲಿ ಲಿಂಗದ ಬ್ರಹ್ಮಭಾಗ, ವಿಷ್ಣು ಹಾಗೂ ಮುಂದಿರುವ ಬಸವಣ್ಣ ಗುಡಿಯಲ್ಲಿ ಭಗ್ನಗೊಂಡಿರುವ ನಂದಿಶಿಲ್ಪಗಳಿವೆ.

ಹನುಮಂತ ದೇವಾಲಯದಲ್ಲಿ ಕ್ರಿ.ಶ. ೧೧೫೭ ರ ಬಿಜ್ಜಳನ ಶಾಸನವು ದಂಡನಾಯಕ ಶ್ರೀಧರಯ್ಯನು ಧೋರೇಶ್ವರ ದೇವರ ಜೀರ್ಣೋದ್ಧಾರಕ್ಕೆ ಭೂದಾನ ಮಾಡಿದನೆಂದಿದೆ. (ಸೌ.ಇ.ಇ. xv : 96) ಇದರಿಂದ ಮೇಲೆ ಹೇಳಿದ ಶಿಲ್ಪಾವಶೇಷಗಳು ಧೋರೇಶ್ವರ ದೇವಾಲಯಕ್ಕೆ ಸಂಬಂಧಿಸಿರುವುದು ಸುಸ್ಪಷ್ಟ ಈ ದೇವಾಲಯವು ಬಿದ್ದು ಹೋದನಂತರ, ಅದೇ ಸ್ಥಳದಲ್ಲಿ ಈಗಿನ ಹನುಮಂತದೇವರ ಗುಡಿಯನ್ನು ನಿರ್ಮಿಸಲಾಗಿದೆ. ಇಲ್ಲಿನ ಮತ್ತೊಂದು ಶಾಸನ ಯಾದವ ಕನ್ನರದೇವನ ಕಾಲಕ್ಕೆ ಸೇರಿದೆ. ಇದು ಊರಿನ ಅಮೃತೇಶ್ವರ ದೇವಾಲಯಕ್ಕೆ ಬಿಟ್ಟ ದಾನವನ್ನು ಉಲ್ಲೇಖಿಸುತ್ತದೆ.

ಸಮೀಪದ ಕಂಬದ ಹನುಮಂತ ಗುಡಿಯಲ್ಲಿ ತಿರುಗಣೆ ಮಂತ್ರದಿಂದ ಕಡೆದ ದುಂಡಾದ ಚಾಲುಕ್ಯ ಶೈಲಿಯ ಕಂಬಗಳನ್ನು ಕಾಣಬಹುದು. ಬಹುಶಃ ಈ ಕಂಬಗಳನ್ನು ಬಿದ್ದುಹೋದ ಧೋರೇಶ್ವರ ದೇವಾಲಯದಿಂದ ತಂದುನಿಲ್ಲಿಸಿರಬಹುದು.

| | | |
|---|---|---|
| ೮. ಗ್ರಾಮ | : | ಅಣ್ಣಿಗೇರಿ |
| ಹೆಸರು | : | ಹಳೇ ಅಮೃತೇಶ್ವರ ದೇವಾಲಯ |
| ಸ್ಥಳ | : | ಹಳೇ ಅಮೃತೇಶ್ವರ ನಗರದಲ್ಲಿದೆ. |
| ಕಾಲ | : | ಆಧುನಿಕ |

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ಮಾಧ್ಯಮ : ಕಪ್ಪುಶಿಲೆ



ಕೆಲವು ದಶಕಗಳ ಹಿಂದೆ ನಿರ್ಮಾಣಗೊಂಡಿರುವ ದೇವಾಲಯವಿದು, ಗರ್ಭಗೃಹ, ಮತ್ತು ತೆರೆದ ಮಂಟಪಗಳಿರುವ ದೇವಾಲಯದಲ್ಲಿ ಕಲ್ಯಾಣದ ಚಾಲುಕ್ಯ ಶೈಲಿಯ ಎರಡು ಕಂಬಗಳನ್ನು ಅಳವಡಿಸಿದ್ದಾರೆ. ಗರ್ಭಗೃಹದ ಚಾವಣಿಯಲ್ಲಿ ಶಿಲಾಚಪ್ಪಡಿಗಳನ್ನು ಅಡ್ಡವಾಗಿ ಪೇರಿಸಲಾಗಿದೆ. ತೆರೆದ ಮಂಟಪ ಮಾಳಿಗೆ ಶೈಲಿಯ ರಚನೆಯದ್ದಾಗಿದೆ. ಗರ್ಭಗೃಹದಲ್ಲಿರುವ ಲಿಂಗ ನೆಲಮಟ್ಟದಲ್ಲಿದೆ. ಲಿಂಗದ ಹಿಂಭಾಗದಲ್ಲಿ ಉಳುಕುದುರೆಗಳ ಲಾಂಛನದ ಶಿಲ್ಪಾವಶೇಷ ಹಾಗೂ ಇತ್ತೀಚಿನ ದೇವಶಿಲ್ಪವೊಂದಿದೆ. ಹೊರಗೆ ಹಳೆಯ ಲಿಂಗದ ರಂಧ್ರಭಾಗವನ್ನು ನೆಲದಲ್ಲಿನಿಲ್ಲಿಸಲಾಗಿದೆ. ಜೊತೆಗೆ ತಿರುಗಣೆ ಯಂತ್ರದಿಂದ ಕಡೆದ ದುಂಡಾದ ಸ್ತಂಬಗಳು ಹಾಗೂ ಶಾಸನ ಕಂಡುಬರುತ್ತವೆ. ಈ ಎಲ್ಲಾ ಪ್ರಾಚ್ಯವಶೇಷಗಳಿಂದ ಇಲ್ಲಿ ಹಳೆಯ ದೇವಾಲಯವಿತ್ತೆಂಬುದು ಸ್ಪಷ್ಟ.

೯. ಗ್ರಾಮ : ಅಣ್ಣಿಗೇರಿ

ಹೆಸರು : ಪಾಳುಗುಡಿ ದೇವಾಲಯ

ಸ್ಥಳ : ಸಂಗಾಪುರ ಪ್ರದೇಶದಲ್ಲಿದೆ.

ಕಾಲ : ಕ್ರಿ.ಶ. ೧೬, ೧೭ ಶತಮಾನ

ರಾಜವಂಶ/ಮಂಡಳಿಕ : ವಿಜಯನಗರೋತ್ತರ

ದಿಕ್ಕು : ಉತ್ತರಾಭಿಮುಖ

ಮಾಧ್ಯಮ : ಕಪ್ಪುಶಿಲೆ

ಹಳೆಯ ದೇವಾಲಯವೊಂದರ ವಾಸ್ತು ಅವಶೇಷಗಳನ್ನು ಬಳಸಿಕೊಂಡು ಈ ಪುಟ್ಟಕಟ್ಟಡವನ್ನು ನಿರ್ಮಿಸಲಾಗಿದೆ. ಕೊಠಡಿ ಮತ್ತು ತೆರೆದ ಮಂಟಪಗಳಿರುವ ಈ ಕಟ್ಟಡವು ಬಳಪದಕಲ್ಲಿನ ರಚನೆಯದ್ದಾಗಿದೆ. ಕೊಠಡಿಯ ಬಾಗಿಲು ತೋರಣದಲ್ಲಿ ನಾಗರಶೈಲಿಯ ಶಿಖರಗಳ ಅಲಂಕರಣವಿದೆ.

ಮಂಟಪದಲ್ಲಿ ಎರಡು ದುಂಡನೆಯ ಸ್ತಂಬಗಳಿವೆ. ಕಟ್ಟಡದ ಸುತ್ತಲೂ ಇತರ ವಾಸ್ತು ಅವಶೇಷಗಳು ಹರಡಿ ಹೋಗಿವೆ. ಬಲಭಾಗದಲ್ಲಿ ದೇಸಾಯಿ ಮನೆತನದವರ ಸಮಾಧಿಗಳನ್ನು ಕಾಣಬಹುದು. ಪಕ್ಕದಲ್ಲಿ ಅಪೂರ್ಣ ರಚನೆಯ ಜಿನಶಿಲ್ಪವೊಂದು ನೆಲದಲ್ಲಿ ಬಿದ್ದಿದೆ. ಅಲ್ಲದೆ ಶಾಸನೋಕ್ತ ನಿಷಧಿ ಮತ್ತು ಸಪ್ತಮಾತೃಕೆಯರ ಲಾಂಛನಗಳಿರುವ ಪಾಣಿಪೀಠ ಇದೆ.



೧೦. ಗ್ರಾಮ : ತುಪ್ಪದ ಕುರಹಟ್ಟಿ

ಹೆಸರು : ಹನುಮಂತದೇವರ ಗುಡಿ

ಸ್ಥಳ : ಗ್ರಾಮದ ಮಧ್ಯದಲ್ಲಿದೆ

ಕಾಲ : ೯ ಮತ್ತು ೧೦ನೇ ಶತಮಾನ

ರಾಜವಂಶ/ಮಂಡಳಿಕ : ರಾಷ್ಟ್ರಕೂಟರು

ವಸ್ತು : ಕಪ್ಪುಶಿಲೆ

ಈ ದೇವಾಲಯವು ಹಂಸರೂಪದಲ್ಲಿ ಇದೆ. ಅದರ ಬಲ ಭಾಗದಲ್ಲಿ ಈ ಶಾಸನ ರಾಷ್ಟ್ರಕೂಟರ ಕಾಲಕ್ಕೆ ಸೇರಿದ್ದು, ೧೧ ನೇ ಶತಮಾನದ ಕಾಲದಲ್ಲಿ ದೇವಾಲಯಕ್ಕೆ ನೀಡಿದ ಭೂದಾನವನ್ನು ತಿಳಿಸುತ್ತದೆ. ಆದರೆ ಊರಿನವರ ಪ್ರಕಾರ ಈ ಶಾಸನವನ್ನು ಬೇರೆ ಕಡೆ ಸಾಗಿಸಲಾಗಿದೆ. ಈ ದೇವಾಲಯದ ಮುಂದೆ ದೀಪಸ್ತಂಭ ಗಣಪತಿಶಿಲ್ಪ ಹಾಗೂ ಪುಷ್ಕರಣಿ ಕಾಣಬಹುದು.

೧೧. ಗ್ರಾಮ : ತುಪ್ಪದ ಕುರಹಟ್ಟಿ

ಹೆಸರು : ಶಂಕರಲಿಂಗೇಶ್ವರ ದೇವಾಲಯ

ಸ್ಥಳ : ಊರ ನಡುವೆ ಇದೆ.

ಕಾಲ : ೯ ಮತ್ತು ೧೧ನೇ ಶತಮಾನ

ರಾಜವಂಶ/ಮಂಡಳಿಕ : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹ ಮತ್ತು ಅಂತರಾಳಗಳು ಪ್ರಾಚೀನ ರಚನೆಗಳಾಗಿವೆ. ಸಭಾಮಂಟಪ ಹೊಸಮಾಳಿಗೆ ರಚನೆಯಾಗಿದೆ. ಗರ್ಭಗೃಹ ಮತ್ತು ಅಂತರಾಳಗಳ ಅಧಿಷ್ಠಾನವೂ ಸೇರಿದಂತೆ ಹೊರಭಿತ್ತಿ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹದ ಒಳಭಾಗದಲ್ಲಿ ಭಿತ್ತಿಗೆ ಹೊಂದಿಕೊಂಡಂತೆ ಮೂರು ದಿಕ್ಕುಗಳಲ್ಲಿ ಎರಡೆರಡು ಹೆಚ್ಚುವರಿ ಸ್ತಂಬಗಳನ್ನು ಅಳವಡಿಸಲಾಗಿದೆ. ಗರ್ಭಗೃಹದ ದ್ವಾರವು ಅರ್ಧಕಂಬಗಳ ಅಲಂಕರಣದಿಂದ ಕೂಡಿದ್ದು ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ. ಅಂತರಾಳದ ಇಕ್ಕೆಲಗಳಲ್ಲಿ ಚೌಕಕಿಂಡಿಗಳ ಅಲಂಕರಣದ ಜಾಲಂಧ್ರಗಳನ್ನು ಅಳವಡಿಸಿದೆ. ಇವುಗಳ ಪಕ್ಕದಲ್ಲಿ ದೇವಕೋಷ್ಠಗಳಿವೆ. ಇದರಿಂದ ನವರಂಗಭಾಗವಿತ್ತೆಂಬುದು ಸ್ಪಷ್ಟವಾಗುವುದು. ಅಂದರೆ ನವರಂಗ ಹಾಳಾದನಂತರ ಈಗಿರುವ ಮಾಳಿಗೆ ಶೈಲಿಯ ಸಭಾಮಂಟಪವನ್ನು ನಿರ್ಮಿಸಿದ್ದಾರೆ. ಗರ್ಭಗೃಹದಲ್ಲಿ ಎತ್ತರವಾದ ವೇದಿಕೆ ಮೇಲೆ ಲಿಂಗವನ್ನಿಡಲಾಗಿದೆ. ಅಂತರಾಳದಲ್ಲಿ ನಂದಿ ಮತ್ತು ಪತ್ನಿ ಸಮೇತನಾದ ದಕ್ಷನ ಶಿಲ್ಪಗಳಿವೆ. ಹೊರಭಾಗದಲ್ಲಿ ಲಿಂಗದ ರುದ್ರಭಾಗ, ಭಗ್ನಗೊಂಡಿರುವ ಸಪ್ತಮಾತೃಕೆಯ ಶಿಲ್ಪ, ಫಲಕ, ಪಾಣಿ ಪೀಠ, ಮೊದಲಾದ ಶಿಲ್ಪಾವಶೇಷಗಳಿವೆ.

ದೇವಾಲಯದ ಮುಂಭಾಗದಲ್ಲಿರುವ ಶಾಸನದ ಅಕ್ಷರಗಳು ಸವೆದಿವೆ ಈ ಶಾಸನವನ್ನು ದಾಖಲಿಸುವಾಗ ಮೇಲಿನ ದೇವಾಲಯವನ್ನು ಪಂಚಲಿಂಗೇಶ್ವರ ಗುಡಿ ಎಂದು ಕರೆಯಲಾಗಿದೆ. ಈ ಊರಲ್ಲಿ ಮತ್ತೊಂದು ಕಲ್ಮೇಶ್ವರ ದೇವಾಲಯ ಕಂಡುಬರುತ್ತದೆ. ಈ ದೇವಾಲಯ ಹೊಸದಾಗಿದ್ದು ಮುಂಭಾಗದಲ್ಲಿ ಸಪ್ತಮಾತೃಕೆಯರ ಪಟ್ಟಿಯನ್ನು ಕಾಣಬಹುದು.

೧೨. ಗ್ರಾಮ : ನಾವಳ್ಳಿ

ಹೆಸರು : ಊರ ಉತ್ತರದಲ್ಲಿದೆ.

ಕಾಲ : ಕ್ರಿ.ಶ. ೧೧ನೇ ಶತಮಾನ

ರಾಜವಂಶ/ಮಂಡಳಿಕ : ಹೊಯ್ಸಳ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಗರ್ಭಗೃಹ ಅಂತರಾಳ ಮತ್ತು ನವರಂಗಭಾಗಗಳನ್ನು ಒಳಗೊಂಡಿದೆ. ದೇವಾಲಯದ ಮುಂದಿರುವ ಶಾಸನವು ಈ ದೇವರನ್ನು ಕಲಿದೇವನೆಂದು ಕರೆದಿದೆ. ಗರ್ಭಗೃಹದ ದ್ವಾರದ ಬಾಗಿಲುವಾಡ ಅರ್ಧಕಂಬ ಮತ್ತು ಪಟ್ಟಿಗಳ ಅಲಂಕರಣದಿಂದ ಕೂಡಿವೆ. ತಳಭಾಗದಲ್ಲಿ ದ್ವಾರಪಾಲಕರು ಮತ್ತು ರತಿ ಮನ್ಮಥರ ಉಬ್ಬುಶಿಲ್ಪಗಳಿವೆ. ನವರಂಗ ಭಾಗವು ವಿಶಾಲವಾಗಿದ್ದು, ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶದ್ವಾರಗಳಿವೆ. ಒಳಭಿತ್ತಿಯಲ್ಲಿ ನಾಲ್ಕು ದೇವಕೋಷ್ಟಕಗಳಿದ್ದು, ಪ್ರತಿಯೊಂದರ ಮೇಲೂ ದ್ರಾವಿಡಶೈಲಿಯ ಶಿಖರಗಳಿದೆ. . ಈ ದೇವಕೋಷ್ಠಗಳಲ್ಲಿ ಶಿವಲಿಂಗ, ವಿಷ್ಣು ಮಹಿಷಮರ್ಧಿನಿ ಹಾಗೂ ಸೂರ್ಯನ ಶಿಲ್ಪಗಳಿವೆ. ಮಧ್ಯದ ನಾಲ್ಕು ಕಂಬಗಳನ್ನು ತಿರುಗಣೆಯಂತ್ರದಿಂದ ಕಡೆದಿದ್ದು, ಬಿಳಿ ಮತ್ತು ಮಣಿ ಹಾರಗಳ ಅಲಂಕರಣದಿಂದ ಕೂಡಿವೆ. ನವರಂಗದ ಪೂರ್ವದ್ವಾರವು ಅರ್ಧಕಂಬಗಳ ಅಲಂಕರಣದಿಂದ ಕೂಡಿದ್ದು ಲಲಾಟದಲ್ಲಿಸರಸ್ವತಿಯ ಉಬ್ಬುಶಿಲ್ಪ ಇದೆ. ದೇವಾಲಯವು ಸರಳವಾದ ಅದಿಷ್ಠಾನದ ಮೇಲಿದ್ದು ಭಿತ್ತಿಭಾಗವು ಯಾವುದೇ ಅಲಂಕರಣವಿಲ್ಲದೆ ಸಪಾಟಾಗಿದೆ. ಶಿಖರದ ಪ್ರತಿಹಂತದ ಮಧ್ಯದಲ್ಲಿ ಶಿಲ್ಪಫಲಕವನ್ನು ಅಳವಡಿಸಲಾಗಿದೆ. ಶಿಖರವು ಸುಖನಾಸವನ್ನು ಹೊಂದಿದ್ದು, ಮುಖಭಾಗದಲ್ಲಿ ನಟರಾಜನ ಉಬ್ಬುಶಿಲ್ಪವಿದೆ. ಇದರ ಮೇಲಿದ್ದ ಹೊಯ್ಸಳ ಲಾಂಛನಶಿಲ್ಪ ಭಗ್ನಗೊಂಡಿದೆ. ದೇವಕೋಷ್ಠಗಳಲ್ಲಿಬಿಡಿಶಿಲ್ಪಗಳಲ್ಲದೆ, ಭೈರವಿ, ನಂದಿ ಮೊದಲಾದ ಶಿಲ್ಪಗಳು ಕಂಡುಬರುತ್ತವೆ. ಶಿಖರವು ಕದಂಬನಾಗರ ಶೈಲಿಯಲ್ಲಿದೆ.

ದೇವಾಲಯದ ಮುಂದಿರುವ ಕ್ರಿ.ಶ. ೧೧೨೧ ರ ಶಾಸನವು ಆರನೆಯ ವಿಕ್ರಮಾದಿತ್ಯನ (S.I.I. xi - iii : 171) ದಂಡನಾಯಕ ಸಾದಿಪಯ್ಯಾದಿಗಳಿಂದ ಅಗ್ರಹಾರ ನಾಪ್ಪೊಳೆಯ ಕಲಿದೇವರಿಗೆ ದಾನ ,ಎಂದು ಉಲ್ಲೆಖಿಸಿದೆ. ನಾವಳ್ಳಿಯ ಪ್ರಾಚೀನ ಹೆಸರು ನಾಪ್ಪೊಳೆ ಎಂದು ಹಾಗೂ ದೇವರ ಹೆಸರು ಕಲಿದೇವ ಎಂದು ಈ ಶಾಸನ ಉಲ್ಲೇಖಿಸಿದೆ.

೧೩. ಗ್ರಾಮ : ಶಲವಡಿ

ಹೆಸರು : ಕಧಿಲೇಶ್ವರ ದೇವಾಲಯ

ಸ್ಥಳ : ಕೆರೆ ಹತ್ತಿರವಿದೆ.

ಕಾಲ : ಕ್ರಿ.ಶ. ೧೧ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಮಾಳಿಗೆ ರಚನೆಯ ಈ ದೇವಾಲಯದ ಗರ್ಭಗೃಹ ಮತ್ತು ಸಭಾಮಂಟಪ ಮಣ್ಣಿನ ಗೋಡೆಯನ್ನು ತೆಗೆದು ಇತ್ತೀಚೆಗೆ ಸಿಮೆಂಟ್ ಗೋಡೆಯನ್ನು ನಿರ್ಮಿಸಿದ್ದಾರೆ. ಗರ್ಭಗೃಹದ ದ್ವಾರದಲ್ಲಿ ಹಳೆಯ ದೇವಾಲಯದ ಹೊಸ್ತಿಲು

ಶಿಲೆಯನ್ನು ಕಾಣಬಹುದು. ಹಳೆ ದೇವಾಲಯದ ನವರಂಗ ಮಧ್ಯದ ಅರ್ಧವೃತ್ತ ವೇದಿಕೆ ಶಿಲೆಯನ್ನು ಸಭಾಮಂಟಪದ ಮೆಟ್ಟಿಲಾಗಿ ಅಳವಡಿಸಿದ್ದಾರೆ.

ದೇವಾಲಯದಲ್ಲಿರುವ ಲಿಂಗ ಹಳೆಯದಾಗಿದೆ. ಸಭಾಮಂಟಪದಲ್ಲೂ ಹಳೆಯ ನಂದಿಶಿಲ್ಪಗಳಿವೆ. ಹೊರ ಆವರಣ ಸಪ್ತಮಾತೃಕೆಯರ ಎರಡು ಶಿಲ್ಪಫಲಕಗಳು ಎರಡು ವೀರಗಲ್ಲುಗಳು, ಲಿಂಗವೊಂದರ ರಂಧ್ರಭಾಗ, ಗಜಲಕ್ಷ್ಮಿ ಮೊದಲಾದ ಶಿಲ್ಪವೇಷಗಳು ಕಂಡುಬರುತ್ತವೆ.

೧೪. ಗ್ರಾಮ : ಶಲವಡಿ

ಹೆಸರು : ರಾಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಇದು ಒಂದೇ ಕೊಠಡಿಯ ದೇವಾಲಯವಾಗಿದೆ. ಇದನ್ನು ಇತ್ತೀಚೆಗೆ ನಿರ್ಮಿಸಿದ್ದಾರೆ ಇಲ್ಲಿರುವ ಲಿಂಗ ಮತ್ತು ನಂದಿ ಶಿಲ್ಪಗಳು ಇತ್ತೀಚಿನವು,ಆದರೆ ದೇವಾಲಯದ ಹೊರಭಾಗದಲ್ಲಿ ಪ್ರಾಚೀನ ಲಿಂಗ, ನಂದಿ, ಗಣೇಶ ಮತ್ತು ವೀರಗಲ್ಲು ಶಿಲ್ಪಾವಶೇಷಗಳು ಬಿದ್ದಿವೆ. ಸಮೀಪದ ವೀರಭದ್ರ ದೇವಾಲಯದ ಮುಂಭಾಗದಲ್ಲಿ ಹಳೆಯ ದೇವಾಲಯದ ಹೊಸ್ತಿಲಲ್ಲಿ ವಾಸ್ತುಶಿಲ್ಪಾವಶೇಷವಿದೆ.

೧೫. ಗ್ರಾಮ : ಬೆಳವಟಿಗೆ

ಹೆಸರು : ರಾಮಲಿಂಗೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಕ್ರಿ.ಶ. ೧೧ನೆಯ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಜೀರ್ಣೋದ್ಧಾರವಾಗಿದೆ. ಗರ್ಭಗೃಹ ಮತ್ತು ಸಭಾಮಂಟಪಗಳಿರುವ ದೇವಾಲಯದಲ್ಲಿ ಪ್ರಾಚೀನ ಲಿಂಗವಿದೆ. ಹಳೆಯ ದೇವಾಲಯ ಬಿದ್ದುಹೋದ ನಂತರ ಈಗಿನದನ್ನು ನಿರ್ಮಿಸಿಕೊಂಡಿದ್ದಾರೆ. ಗರ್ಭಗೃಹದ ಹೊರಭಿತ್ತಿಯನ್ನು ದಿಂಡುಗಲ್ಲಿನಿಂದ ಕಟ್ಟಲಾಗಿದೆ. ಸಭಾಮಂಟಪದ ಹೊರಗೋಡೆ ಮಣ್ಣಿನದ್ದಾಗಿದೆ.

ಗರ್ಭಗೃಹದಲ್ಲಿ ಯೋಗಿಪೀಠವಿಲ್ಲದ ಲಿಂಗವಿದೆ. ಇದನ್ನು ನಿಧಿ ಆಸೆಯಿಂದ ಭಗ್ನಗೊಳಿಸಿದ್ದಾರೆ. ಲಿಂಗದ ಮುಂದಿರುವ ನಂದಿ ಶಿಲ್ಪವೂ ಭಗ್ನಗೊಂಡಿದೆ. ಸಭಾಮಂಟಪದಲ್ಲಿ ಎರಡು ಹಳೆಯ ಲಿಂಗಗಳು ಹಾಗೂ ಇತ್ತೀಚಿನ

ನಂದಿಶಿಲ್ಪಗಳಿವೆ. ಹೊರಭಾಗದಲ್ಲಿ ನಂದಿಶಿಲ್ಪಗಳು ಮತ್ತು ವೀರಗಲ್ಲುಗಳಿವೆ. ಇದೇ ಊರಿನ ಪಂಚಲಿಂಗೇಶ್ವರ ದೇವಾಲಯದಲ್ಲಿ ಒಂದೆಡೆ ಐದು ಲಿಂಗಗಳಿವೆ. ಒಂದು ಲಿಂಗ ಹಳೆಯದಾಗಿದ್ದು, ಉಳಿದವು ಆಧುನಿಕ ಕಾಲಕ್ಕೆ ಸೇರಿವೆ.

ಇಲ್ಲಿರುವ ಆರನೆಯ ವಿಕ್ರಮಾದಿತ್ಯನ ಕ್ರಿ.ಶ. ೧೧೫೩ರ ಶಾಸನವು ಬೈರುಂಬರ ಮಲ್ಲಮಯ್ಯನು ಬೆಳ್ಳಪೆಟ್ಟಿಗೆಯಲ್ಲಿ ಬೈರುಂಭೇಶ್ವರ ದೇವಾಲಯವನ್ನು ಕಟ್ಟಿಸಿ ಭೂದಾನ ಮಾಡಿದನೆಂದಿದೆ. (S.I.I-xi-ii;138) ಇದರಿಂದ ಮೇಲಿನ ರಾಮಲಿಂಗೇಶ್ವರ ಗುಡಿಯ ಪ್ರಾಚೀನ ಹೆಸರು ಬೈರುಂಬೇಶ್ವರ ಎಂದು ತಿಳಿದುಬರುವುದು ಬೆಳವಟಿಗೆಯ ಮೂಲ ಹೆಸರು ಬೆಲವಟ್ಟಿಗೆ ಎಂದಿದೆ. ಉಳಿದೆರಡು ಶಾಸನಗಳು ವಿಜಯನಗರ ಕಾಲಕ್ಕೆ ಸೇರಿದ್ದು, ನಾವಿದರಿಗೆ ನೀಡಿದ ಸುಂಕವಿನಾಯಿತಿ ಮತ್ತು ಕೆರೆಯನ್ನು ಅಗೆದವರಿಗೆ ನೀಡಿದ ದಾನವನ್ನು ಕುರಿತಿದೆ.

೧೯. ಗ್ರಾಮ : ಕಾಲವಾಡ

ಹೆಸರು : ಪಂಚಲಿಂಗೇಶ್ವಗುರಡಿ

ಸ್ಥಳ : ಊರಮಧ್ಯದಲ್ಲಿದೆ.

ಕಾಲ : ಆಧುನಿಕ

ರಾಜವಂಶ/ಮಂಡಳಿಕ : ಕಲ್ಯಾಣದ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

(ಪ್ರಕಟಣೆ ಮಹಾದೇವ ಸಿ, ೨೦೦೬ ಪುಟ ೧೩೧)

ಹಳೆಯ ದೇವಾಲಯ ಬಿದ್ದು ಹೋದ ಪರಿಣಾಮವಾಗಿ ಇತ್ತೀಚೆಗೆ ಆರ್.ಸಿ.ಸಿ.ಕಟ್ಟದ ದೇವಾಲಯವನ್ನು ನಿರ್ಮಿಸಿದ್ದಾರೆ.

ಗರ್ಭಗೃಹ ಮತ್ತು ಸಭಾಮಂಟಪಗಳಿರುವ ದೇವಾಯದಲ್ಲಿ ಪ್ರಾಚೀನ ಐದು ಲಿಂಗಗಳಿವೆ. ಸಭಾಮಂಟಪದಲ್ಲಿ ನಂದಿ ಮತ್ತು ಗಣಪತಿ ಶಿಲ್ಪಗಳಿವೆ. ಹೊರಭಾಗದಲ್ಲಿ ಕೆಲವು ವಾಸ್ತು ಅವಶೇಷಗಳು, ನಾಗ ಮತ್ತು ಗಣಪತಿ ಶಿಲ್ಪಗಳು ಕಂಡುಬರುತ್ತವೆ. ಪಕ್ಕದಲ್ಲಿರುವ ಆಂಜನೇಯ ದೇವಾಲಯದ ಹತ್ತಿರ ಗೋಶಾಸನ ಕಲ್ಲುಗಳು ಮತ್ತು ಚತುರ್ಮುಖ ಶಿಲ್ಪಗಳಿವೆ.

೧೭. ಗ್ರಾಮ : ಬೆಳಹಾರ

ಹೆಸರು : ಕಲ್ಲೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಕ್ರಿ.ಶ. ಸು. ೧೭ನೆ ಶತಮಾನ

ರಾಜವಂಶ/ಮಂಡಳಿಕ : ವಿಜಯನಗರೋತ್ತರ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಸಭಾಮಂಟಪದ ದಕ್ಷಿಣ ಮತ್ತು ಪೂರ್ವದಿಕ್ಕುಗಳಲ್ಲಿ ಪ್ರವೇಶದ್ವಾರಗಳಿವೆ. ಗರ್ಭಗೃಹದಲ್ಲಿ ಪ್ರಾಚೀನ ಲಿಂಗವಿದೆ. ಸಭಾಮಂಪಟದಲ್ಲಿರುವ ನಂದಿಶಿಲ್ಪ ಇತ್ತೀಚಿನದು. ಹೊರಭಾಗದಲ್ಲಿ ಪ್ರಾಣಿಪೀಠ ಮತ್ತಿತರ ಶಿಲ್ಪಾವಶೇಷಗಳಿವೆ. ಹಿಂಭಾಗದಲ್ಲಿರುವ ಮರದ ಕೆಳಗೆ ನಂದಿಶಿಲ್ಪವಿದೆ. ಈ ಊರಿನ ಆಂಜನೇಯ ದೇವಾಲಯದ ಎದುರು ಗಜಲಕ್ಷ್ಮಿ, ವೀರಗಲ್ಲು ಮತ್ತಿತರ ಶಿಲ್ಪಾವಶೇಷಗಳು ಕಂಡುಬರುತ್ತವೆ.

೧೮. ಗ್ರಾಮ : ಚಿಲಕವಾಡ

ಹೆಸರು : ಈಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೭ನೇ ಶತಮಾನ

ರಾಜವಂಶ/ಮಂಡಳಿಕ : ವಿಜಯನಗರೋತ್ತರ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಇಟ್ಟಿಗೆ

(ಪ್ರಕಟಣೆ ಮಹಾದೇವ ಸಿ., ೨೦೦೬ ಪುಟ ೧೩೪)

ದೇವಾಲಯ ಗರ್ಭಗೃಹ ಸಭಾಮಂಟಪಗಳನ್ನೊಳಗೊಂಡಿದೆ. ದೇವಾಲಯದಲ್ಲಿ ಪ್ರಾಚೀನಲಿಂಗವಿದೆ. ಹೊಸಮಾಳಿಗೆ ರಚನೆಯಾಗಿದೆ. ನಂದಿಶಿಲ್ಪ ಇತ್ತೀಚಿನದು, ಹೊರಭಾಗದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಇದರಿಂದ ಇಲ್ಲಿ ಪ್ರಾಚೀನ ದೇವಾಲಯವಿದ ಬಗ್ಗೆ ತಿಳಿದುಬರುತ್ತದೆ.

೧೯. ಗ್ರಾಮ : ಕೂಮಾರಗೊಪ್ಪ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು ಮಣ್ಣು, ಹೆಂಚು, ಕಟ್ಟಿಗೆ

ಈ ದೇವಾಲಯ ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಮುಂಭಾಗದಲ್ಲಿ ಇಳಿಜಾರಾದ ಹೆಂಚಿನ ಚಾವಣಿಯನ್ನು ನಿರ್ಮಿಸಲಾಗಿದೆ. ಗರ್ಭಗೃಹದಲ್ಲಿ ಪ್ರಾಚೀನ ಲಿಂಗ ಮತ್ತು ನಂದಿಶಿಲ್ಪ ಹೊರಗೆ ಕೆಲವು ಶಿಲಾವಶೇಷಗಳು ಕಾಣಬರುತ್ತವೆ. ಇದರಿಂದ ಇಲ್ಲಿ ಹಳೆಯ ದೇವಾಲಯದ ಸೂಚನೆಗಳು ದೊರೆಯುತ್ತವೆ. ಇಲ್ಲಿರುವ ಶಾಸನಗಳೆರಡು ಕಲ್ಯಾಣ ಚಾಲುಕ್ಯ ಕಾಲದವು. ಎರಡನೆಯ ಸೋಮೇಶ್ವರನ ಶಾಸನವು ಮಾಂಡಳಿಕನೊಬ್ಬನನ್ನು ಉಲ್ಲೇಖಿಸುತ್ತದೆ. (S.I.I, xi-i-118)

೨೦. ಗ್ರಾಮ : ಶಿರಕೋಳ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಗುಡಿ ಓಣಿಯಲ್ಲಿದೆ

ಕಾಲ : ೧೭ನೇ ಶತಮಾನ

ರಾಜವಂಶ/ಮಂಡಳಿಕ : ವಿಜಯನಗರೋತ್ತರ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು ಸಿಮೆಂಟ್, ಕಟ್ಟಿಗೆ

ಗರ್ಭಗೃಹ ಅಂತರಾಳ ಮತ್ತು ಸಭಾಮಂಟಪಗಳಿರುವ ಈ ದೇವಾಲಯವು ಮುಂಭಾಗದಲ್ಲಿ ಉಪ್ಪರಿಗೆಯನ್ನು ಹೊಂದಿದೆ. ಗರ್ಭಗೃಹ ಮತ್ತು ಅಂತರಾಳಗಳು ಆರ್.ಸಿ.ಸಿ. ಇಂದ ನಿರ್ಮಾಣವಾಗಿದ್ದು, ಸಭಾಮಂಟಪವನ್ನು ಮರದ ತೊಲೆ ಮತ್ತು ಜಂತಿಗಳನ್ನು ಬಳಿಸಿ ಮಾಳಿಗೆ ಶೈಲಿಯಲ್ಲಿ ನಿರ್ಮಿಸಲಾಗಿದೆ. ಮುಂಭಾಗದಲ್ಲಿ ಶಿಲಾಸ್ತಂಭವಿದೆ.

ಗರ್ಭಗೃಹದಲ್ಲಿ ನೆಲಮಟ್ಟದಲ್ಲಿರುವ ಚೌಕರಚನೆಯ ಲಿಂಗವಿದೆ. ರಂಧ್ರಭಾಗ ದಪ್ಪವಿದ್ದು, ಬಹುಶಃ ಬೇರೆಯದನ್ನು ಅಳವಡಿಸಿರಬಹುದು. ಹೊರಭಾಗದಲ್ಲಿ ನಾಗಶಿಲ್ಪವಿದೆ.

೨೧. ಗ್ರಾಮ : ಹನಸಿ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳಿಂದ ಕೂಡಿದೆ. ದೇವಾಲಯದಲ್ಲಿ ಹೊಸದಾಗಿ ರಚಿಸಿದ ಲಿಂಗ ಮತ್ತು ನಂದಿ ಶಿಲ್ಪಗಳಿವೆ. ಹೊರಭಾಗದಲ್ಲಿ ಬೇವಿನಮರದ ಕೆಳಗೆ, ಹಳೆಯ ಲಿಂಗ, ವೀರಗಲ್ಲು, ಮತ್ತು ಸಪ್ತಮಾತೃಕೆಯರ ಶಿಲ್ಪಾವಶೇಷಗಳಿವೆ.

ಇದೇ ಊರಿನ ಕುದೇದರ ವಂಶದವರ ಸೇರಿದ ಮನೆಯ ಬಲಭಾಗದಲ್ಲಿ ಶಾಸನವಿದೆ. ಇದು ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಲಿಪಿಹೊಂದಿದೆ. ಇದೇ ಊರಿನಲ್ಲಿಮತ್ತೊಂದು ಹನುಮಂತ ದೇವಾಲಯವು ಹೊಸದಾಗಿದೆ. ಇದರ ಬಲಭಾಗದಲ್ಲಿ ವೀರಗಲ್ಲು ಇದೆ.

೨೨. ಗ್ರಾಮ : ಬ್ಯಾಲಾಳ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಕ್ರಿ.ಶ. ೧೧ ಮತ್ತು ೧೨ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯವು ಗರ್ಭಗೃಹ ಅಂತರಾಳ ಸಭಾಮಂಟಪ ಒಳಗೊಂಡಿದೆ. ಈ ದೇವಾಲಯದ ಭಿತ್ತಿ ಮಣ್ಣಿನದು ಗರ್ಭಗೃಹದಲ್ಲಿರುವ ಲಿಂಗ ಹಳೆಯದು ಅಂತರಾಳದಲ್ಲಿ ಹಳೆಯ ಲಿಂಗದ ರುದ್ರಭಾಗ, ಭಗ್ನಗೊಂಡ ನಂದಿ ಮತ್ತು ನಾಗಶಿಲ್ಪಗಳಿವೆ. ಇಲ್ಲಿನ ಕ್ರಿ.ಶ. ೧೧೦೨-೨೩ ಶಾಸನ ತ್ರುಟಿತವಾಗಿದ್ದು ಭೂದಾನವನ್ನು ಉಲ್ಲೇಖಿಸುತ್ತದೆ. (S.I.I. xi-ii:185) ಹನುಮಂತದೇವರ ಗುಡಿ ಮುಂದಿರುವ ಸುಮಾರು ೧೩ ಶತಮಾನವು ಮೊಮ್ಮರಸನ ದೇವತೆಯನ್ನು ಉಲ್ಲೇಖಿಸುತ್ತದೆ. (ಅದೇxv=೯೩೬)

ಈ ದೇವಾಲಯುವು ಹೊಸದಾಗಿದೆ. ದೇವಾಲಯುದ ಎಡಗೋಡೆಯು ಮೇಲೆ ಲಿಪಿಗಳು ಹೊಳಮುಖವಾಗಿರುವಂತೆ ಹೊರ ಮುಖದಲ್ಲಿ ಆಂಜನಯ್ಯ ಶಿಲ್ಪವನ್ನು ಕೆತ್ತಿ ಭಿತ್ತಿಗೆ ತಾಗಿಸಿ ಗಾರೆಯನ್ನು ಹಾಕಲಾಗಿದೆ.

೨೩. ಗ್ರಾಮ : ಬಳ್ಳೂರು

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧ ನೇ ಶತಮಾನ

ರಾವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ಮಾಳಿಗೆ ಶೈಲಿಯ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಪ್ರಾಚೀನ ಲಿಂಗವಿದೆ. ನಂದಿಶಿಲ್ಪ ಇತ್ತೀಚಿನದು. ಹೊರಭಾಗದಲ್ಲಿ ನಾಗಶಿಲ್ಪ ಮತ್ತು ಚತುರ್ಮುಖ ಬ್ರಹ್ಮನ ಶಿಲ್ಪಾವಶೇಷಗಳಿವೆ. ದೇವಾಲಯದ ಹತ್ತಿರಲಿಂಗವೊಂದು ಜಗತಿಯ ಮೇಲಿದ್ದು, ರುದ್ರಭಾಗದ ಬದಲಿಗೆ ಮುಖದ ಶಿಲ್ಪವನ್ನು ಅಳವಡಿಸಿದ್ದಾರೆ. ಇದನ್ನು ಸ್ಥಳೀಯರು ಜುಂಜಪ್ಪ ಎಂದು ಕರೆಯುತ್ತಾರೆ.

ಈ ಊರಿನಲ್ಲಿ ಮತ್ತೊಂದು ಹನುಮಂತ ದೇವರ ಗುಡಿ ಇದೆ. ಈ ದೇವಾಲಯವು ಹಳೆಯದಾಗಿದ್ದು ಮಣ್ಣಿನಿಂದ ಕೂಡಿದೆ. ಗರ್ಭಗೃಹ ಸಭಾಮಂಟಪವನ್ನು ಹೊಂದಿದೆ. ದೇವಾಲಯದ ಮುಂಭಾಗದಲ್ಲಿ ಸಪ್ತಮಾತ್ರಿಕೆಯ ತುಣುಕು ಬಿದ್ದಿದೆ.

೨೪. ಗ್ರಾಮ : ಜಾವೂರು

ಹೆಸರು : ಕಲ್ಮೇಶ್ವರಗುಡಿ

ಸ್ಥಳ : ಕೆರೆಹತ್ತಿರದಲ್ಲಿದೆ.

ಕಾಲ : ೧೧-೧೨ ಶತಮಾನ

ರಾವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

(ಪ್ರಕಟಣೆ ಮಹಾದೇವ ಸಿ., ೨೦೦೬ ಪುಟ ೧೩೪)

ಈ ದೇವಾಲಯವು ಮಾಳಿಗೆ ಕಟ್ಟದ ರಚನೆಯಲ್ಲಿದೆ, ಗರ್ಭಗೃಹ ಮತ್ತು ಸಭಾಮಂಟಪಗಳಿರುವ ಈ ದೇವಾಲಯದಲ್ಲಿ ಪ್ರಾಚೀನ ಲಿಂಗ ಮತ್ತು ನಂದಿಶಿಲ್ಪಗಳಿವೆ. ಇದರಿಂದ ಇಲ್ಲಿ ಪ್ರಾಚೀನ ಶಿವಾಲಯವಿತ್ತೆಂದು ಸ್ಪಷ್ಟವಾಗುವುದು.

ಈ ಊರಿನ ಹನುಮಂತ ದೇವರಗುಡಿ ಆಧುನಿಕ ಶೈಲಿಯಲ್ಲಿದೆ ದೇವಾಲಯದ ಮುಂಭಾಗದ ಕಂಬದಲ್ಲಿ ಶಾಸನವನ್ನು ಗುರುತಿಸಬಹುದು. ಆದರೆ ಇದು ಇಂದಿಗೂ ಬಣ್ಣದಿಂದ ಲೇಪಿತವಾಗಿದೆ. ಇದೇ ಊರಿನ ಶಾಲಾ ಮೈದಾನದ ಮುಂಭಾಗದಲ್ಲಿ ವೀರಗಲ್ಲಿನ ತುಣುಕ ಕಾಣಬಹುದು.

೨೫. ಗ್ರಾಮ : ಹೆಬ್ಬಾಳ

ಹೆಸರು : ಕಲ್ಲೇಶ್ವರ ದೇವಾಲಯ

ಸ್ಥಳ : ಕಲ್ಲೇಶ್ವರ ಓಣಿಯಲ್ಲಿದೆ

ಕಾಲ : ೧೧ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಇತ್ತೀಚೆಗೆ ಹೊಸದಾಗಿ ನಿರ್ಮಿಸುತ್ತಿರುವ ದೇವಾಲಯವಿದ್ದು, ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಪ್ರಾಚೀನ ದೇವಾಲಯಕ್ಕೆ ಸಂಬಂಧಿಸಿದ ಭಗ್ನಶಿಲ್ಪಾವಶೇಷಗಳು ಇಲ್ಲಿವೆ. ಹಳೆಯ ದೇವಾಲಯ ಬಿದ್ದು ಹೋದನಂತರ ಈಗಿನ ದೇವಾಲಯ ನಿರ್ಮಾಣವಾಗಿದೆ.

೨೬. ಗ್ರಾಮ : ಅಳಗವಾಡಿ

ಹೆಸರು : ಕಲ್ಮೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧-೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯವು ಗರ್ಭಗೃಹ ಸಭಾಮಂಟಪಗಳನ್ನು ಹೊಂದಿದೆ. ಪ್ರಾಚೀನ ಲಿಂಗವಿದೆ. ಸಭಾಮಂಟಪದಲ್ಲಿ ಹಳೆಯ ಮತ್ತು ಇತ್ತೀಚಿನ ನಂದಿ ಶಿಲ್ಪಗಳಿವೆ. ದೇವಾಲಯದ ಭಿತ್ತಿ ಮಣ್ಣಿನದು. ಹಳೆಯ ದೇವಾಲಯ ಬಿದ್ದುಹೋದ ನಂತರ ಈಗಿನ ದೇವಾಲಯವನ್ನು ಸುಮಾರು ದಶಕಗಳ ಹಿಂದೆ ನಿರ್ಮಿಸಿದ್ದಾರೆ. ಗರ್ಭಗೃಹದ ದ್ವಾರವು ಮರದ ರಚನೆಯಾಗಿದ್ದು ಸೂಕ್ಷ್ಮ ಕೆತ್ತನೆಗಳಿಂದ ಅಲಂಕೃತವಾಗಿದೆ.

೨೭. ಗ್ರಾಮ : ಗುಡಿಸಾಗರ

ಹೆಸರು : ಕಲ್ಮೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧-೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು ಮಣ್ಣು

ಈ ದೇವಾಲಯವು ಜೀರ್ಣೋದ್ಧಾರಗೊಂಡಿರುವ ಗರ್ಭಗೃಹವನ್ನು ಸಭಾಮಂಟಪವನ್ನು ಹೊಂದಿದ್ದು ಗರ್ಭಗೃಹದ ಭಿತ್ತಿ ಮತ್ತು ಚಾವಣಿ ಭಾಗಗಳನ್ನು ನವೀಕರಿಸಿದ್ದಾರೆ. ಬಹುಶಃ ಪ್ರಾಚೀನ ದೇವಾಲಯ ಹಾಳಾದ ನಂತರ ಈಗಿರುವ ದೇವಾಲಯವನ್ನು ನಿರ್ಮಿಸಿರಬೇಕು. ಸಭಾಮಂಟಪದಲ್ಲಿ ಸಪ್ತಮಾತೃಕೆಯರ ಶಿಲ್ಪಫಲಕ, ಭಗ್ನಗೊಂಡಿರುವ ವಿಷ್ಣು, ಗಣಪತಿ ನಾಗಶಿಲ್ಪಗಳು, ಗಣಪತಿ, ವೀರಗಲ್ಲುಗಳು ಮತ್ತಿತರ ಶಿಲ್ಪಾವಶೇಷಗಳು ಕಂಡುಬರುತ್ತವೆ. ಈ ಎಲ್ಲ ಶಿಲ್ಪಾವಶೇಷಗಳು ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಶಿವಾಲಯ ಇತ್ತೆಂಬುದನ್ನು ಖಾತರಿಪಡಿಸುತ್ತವೆ. ಈ ಊರಿನ ಆಂಜನೇಯ ದೇವಾಲಯದ ಮುಂಭಾಗದಲ್ಲಿ ಮಾಸ್ತಿಕಲ್ಲೊಂದನ್ನು ಕಾಣಬಹುದು.

ಈ ಊರಲ್ಲಿ ಚಳ್ಳಪ್ಪಗುಡಿ ದೇವಾಲಯ ಹಳೇಕಲ್ಲಿನ ಕಟ್ಟಡವಾಗಿದ್ದು ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದೆ ಅಧಿಷ್ಠಾನಕ್ಕೆ ಉದ್ದಕ್ಕೂ ಮೆಟ್ಟಿಲನ್ನು ಕಾಣಬಹುದು. ಒಳಭಾಗದಲ್ಲಿ ಬರಮಪ್ಪನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನು ಚಳ್ಳಪ್ಪಗುಡಿ ಎಂದು ಕರೆಯುತ್ತಾರೆ.

ಇಲ್ಲಿನ ಶಾಸನ ವಿಜಯನಗರ ಕಾಲಕ್ಕೆ ಸೇರಿದ್ದು ಸದಾಶಿವರಾಯನು ನಾವಿದ ನಾಗೋಜನಿಗೆ ಮಾನ್ಯದ ದಾನ ನೀಡಿದನೆಂದು ತಿಳಿಸುತ್ತದೆ.

೨೮. ಗ್ರಾಮ : ನಾಗನೂರು

ಹೆಸರು : ಕಲ್ಮೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಹೊಸದಾಗಿ ನಿರ್ಮಾಣಗೊಳ್ಳುತ್ತಿರುವ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಹಳೆಯಲಿಂಗ ನಂದಿ, ನಾಗ, ಭಗ್ನಗೊಂಡಿರುವ ಭೈರವ ಮತ್ತು ಗಣಪತಿ ಶಿಲ್ಪಗಳಿವೆ.

ಗರ್ಭಗೃಹಕ್ಕೆ ಮರದ ಬಾಗಿಲನ್ನು ಅಳವಡಿಸಲಾಗಿದೆ. ದ್ವಾರದ ಲಲಾಟಬಿಂಬದಲ್ಲಿ ಗಣಪತಿಯ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ.

೨೯. ಗ್ರಾಮ : ಕಡದಹಳ್ಳಿ

ಹೆಸರು : ಕಲ್ಮೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಕ್ರಿ.ಶ. ೧೧-೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹ ಜೀರ್ಣೋದ್ಧಾರಗೊಂಡಿದೆ. ಹೊರಭಿತ್ತಿಭಾಗವನ್ನು ದೊಡ್ಡ ಕಲ್ಲುಗಳಿಂದ ನಿರ್ಮಿಸಿದ್ದಾರೆ. ಮೇಲೆ ಶಿಖರ ಮತ್ತು ಕಳಸವಿದೆ. ಸಭಾಮಂಟಪವನ್ನು ಸಿಮೆಂಟಿನಿಂದ ನಿರ್ಮಿಸಿದ್ದಾರೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಗೋಡೆಯಲ್ಲಿ ಅರ್ಧಕಂಬಗಳಿವೆ. ಉತ್ತರವಾದ ಅಧಿಷ್ಠಾನದ ಮೇಲೆ ದೇವಾಲಯ ಹೊಂದಿದೆ ಬಿತ್ತಿಭಾಗದಲ್ಲಿ ಶಿಖರಕಳಸದ ಚಿತ್ರಗಳಿವೆ.

೩೦. ಗ್ರಾಮ : ಅಮರಗೋಳ

ಹೆಸರು : ಶಂಕರಲಿಂಗ ದೇವಸ್ಥಾನ

ಸ್ಥಳ : ಊರ ಈಶಾನ್ಯ ಮೂಲೆಯಲ್ಲಿದೆ.

ಕಾಲ : ಕ್ರಿ.ಶ. ೧೦ ಮತ್ತು ೧೧ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

(ಪ್ರಕಟಣೆ ಮಹಾದೇವ ಸಿ., ೨೦೦೬ ಪುಟ ೧೨೬)

ಇಲ್ಲಿನ ದೇವಾಲಯವು ನಾಶವಾಗಿದ್ದು ಹೊಸದಾಗಿ ರಚನೆಯಾಗಿದೆ. ಶಂಕರಲಿಂಗ ದೇವಾಲಯ ಪ್ರಸಿದ್ಧವಾಗಿದೆ. ಊರಿನ ಹಳ್ಳದಭಾಗದಲ್ಲಿ ನಾಗಲಿಂಗ ಭಗ್ನ ಅವಶೇಷಗಳು ಶಾಸನದ ತುಣುಕೊಂದು ಭನ್ನಿಮರದ ಕೆಳಗೆ ಬಿದ್ದಿವೆ. ಈ ಶಾಸನವು ಕಲ್ಯಾಣದ ಚಾಲುಕ್ಯರ ಶೈಲಿಯ ಲಿಪಿಯನ್ನು ಹೊಂದಿರುವ ವಿವರ ಅಸ್ಪಷ್ಟವಾಗಿದೆ.

೩೧. ಗ್ರಾಮ : ಅರಹಟ್ಟಿ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಬೆಣ್ಣೆಹಳ್ಳದ ದಂಡೆಯಲ್ಲಿ

ಕಾಲ : ಕ್ರಿ.ಶ. ೧೧ ಮತ್ತು ೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಗರ್ಭಗೃಹದಲ್ಲಿ ಹಳೆಯ ಲಿಂಗವಿದೆ ಲಿಂಗವು ಬ್ರಹ್ಮಭಾಗ ಮತ್ತು ರುದ್ರಭಾಗಗಳನ್ನು ಹೊಂದಿದೆ. ಗರ್ಭಗೃಹದ ದ್ವಾರದ ಹೊಸ್ತಿಲು ಹಳೆಯ ದೇವಾಲಯಕ್ಕೆ ಸಂಬಂಧಿಸಿದೆ. ಇದರಿಂದ ಇಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯವಿದ್ದು, ಅದು ಹಾಳಾದ ನಂತರ ಮೇಲೆ ಹೇಳಿದ ದೇವಾಲಯ ನಿರ್ಮಿಸಿದಂತೆ ಕಂಡುಬರುತ್ತದೆ. ಹೊಸ್ತಿಲು ಭಾಗವು ಕಮಲ ಲತಾಬಳ್ಳಿ ಮತ್ತು ಮಂಡಿಮೇಲೆ ಕೈಯೂರಿಕುಳಿತ ಸೂಕ್ಷ್ಮ ಶಿಲ್ಪಗಳನ್ನು ಒಳಗೊಂಡಿದೆ.

ಹೊರಭಾಗದಲ್ಲಿ ಒರಟು ರಚನೆಯ ನಂದಿ ಶಿಲ್ಪವಿದೆ. ಪಕ್ಕದಲ್ಲಿ ಹರಿಯುವ ಬೆಣ್ಣೆಹಳ್ಳವು ಪ್ರವಾಹ ಸಂದರ್ಭದಲ್ಲಿ ಎರಡೂ ದಡಗಳನ್ನು ಕೊರೆದು ತನ್ನ ಪಾತ್ರವನ್ನು ವಿಸ್ತರಿಸಿಕೊಂಡಿರುವುದನ್ನು ಕಾಣಬಹುದು. ಬಹುಶಃ ಈ ಕಾರಣದಿಂದಲೇ ಹಳೆಯ ದೇವಾಲಯ ಹಾಳಾಗಿರುವ ಸಾಧ್ಯತೆ ಇದೆ. ಈ ಊರಿನ ಕಲ್ಲಪ್ಪನ ಗುಡಿ ಮುಂದೆ ವೀರಗಲ್ಲಿನ ತುಂಡೊಂದು ಹಾಳಾಗಿ ಬಿದ್ದಿದೆ.

ಈ ಊರಲ್ಲಿ ಮತ್ತೊಂದು ಹನುಮಂತ ದೇವರಗುಡಿ ಕಂಡುಬರುತ್ತದೆ. ಹೊರಭಾಗದಲ್ಲಿ ಅವಶೇಷಗಳು ಕಂಡುಬರುತ್ತವೆ. ದೇವಾಲಯದ ಬಲಭಾಗದಲ್ಲಿ ಭಗ್ನಗೊಂಡಿರುವ ಶಿವಲಿಂಗವನ್ನು ಕಾಣಬಹುದು. ಸುಮಾರು ೭ ಕುದುರೆಗಳ ಈ ಶಿವಲಿಂಗವನ್ನು ಹೊತ್ತು ಒಯ್ಯುವ ಚಿತ್ರವನ್ನು ಗುರುತಿಸಬಹುದು. ಅದರ ದೇವಾಲಯದ ಮುಂಭಾಗದಲ್ಲಿ ನೃತ್ಯದಲ್ಲಿ ತೊಡಗಿರುವ ಶಿಲಾಬಾಲಕೆಯನ್ನು ಕಾಣಬಹುದು.

೩೨. ಗ್ರಾಮ : ತಡಹಾಳ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧-೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಇಟ್ಟಿಗೆ

ಈ ದೇವಾಲಯವು ಸಂಪೂರ್ಣವಾಗಿ ನಾಶವಾಗಿದ್ದು ಈಗ ಹೊಸ ಕಟ್ಟಡ ನಿರ್ಮಾಣವಾಗಿದೆ. ಗರ್ಭಗೃಹ ಮತ್ತು ಸಭಾಮಂಟಪಗಳಿವೆ. ಹೊರಗೋಡೆಯನ್ನು ಇಟ್ಟಿಗೆ ಮತ್ತು ಸಿಮೆಂಟಿನಿಂದ ನಿರ್ಮಿಸಿ ಜೀರ್ಣೋದ್ಧಾರಗೊಳಿಸಲಾಗಿದೆ.

ಗರ್ಭಗೃಹದಲ್ಲಿರುವ ಲಿಂಗ ಹಳೆಯದು ಲಿಂಗದ ವಿಷ್ಣುಭಾಗವನ್ನು ಸಿಮೆಂಟಿನಿಂದ ಪ್ಲಾಸ್ಟರ್ ಮಾಡಲಾಗಿದೆ.

ಲಿಂಗದ ಬಳಿ ಕಮಲ ಹಿಡಿದು ಕುಳಿತ ಸೂರ್ಯಶಿಲ್ಪವಿದೆ. ಹೊರಗೆ ನಾಗ, ಭೈರವ ಭಗ್ನಗೊಂಡಿರುವ ಮಹಾವೀರನ ಶಿಲ್ಪ ಹಾಗೂ ಹಳೆಯ ದೇವಾಲಯದ ಅಲಂಕೃತ ಭಗ್ನಾವಶೇಷಗಳು ಕಂಡುಬರುತ್ತವೆ. ಈ ಅವಶೇಷಗಳು ಈ ಊರಲ್ಲಿ ಜೈನ ಧರ್ಮ ಇದನ್ನು ಸೂಚಿಸುತ್ತವೆ.

೩೩. ಗ್ರಾಮ : ಕೊಗವಾಡ

ಹೆಸರು : ವರಕಲ್ಮೇಶ್ವರ ದೇವಸ್ಥಾನ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧-೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಇಟ್ಟಿಗೆ ಸಿಮೆಂಟ್ ಕಟ್ಟಿಗೆ

ಈ ದೇವಾಲಯ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹ ಜೀರ್ಣೋದ್ಧಾರವಾಗಿದೆ. ದೇವಾಲಯದ ಭಿತ್ತಿ ಇಟ್ಟಿಗೆ ಮತ್ತು ಸಿಮೆಂಟಿನಿಂದ ನವೀಕರಿಸಿದೆ. ಗರ್ಭಗೃಹದ ಮೇಲೆ ಶಿಖರವಿದ್ದು, ಕಳಸವನ್ನು ಒಳಗೊಂಡಿದೆ.

ದೇವಾಲಯದಲ್ಲಿ ಲಿಂಗ ಇತ್ತೀಚಿನದು ಅಂತರಾಳದಲ್ಲಿ ನಂದಿಶಿಲ್ಪವಿದೆ ಹೊರಭಾಗದಲ್ಲಿ ಭಗ್ನಗೊಂಡಿರುವ ಹಳೆಯ ಲಿಂಗ ಮತ್ತು ನಂದಿ ಶಿಲ್ಪಗಳಿವೆ. ಈ ಊರಿನ ಆಂಜನೇಯ ದೇವಾಲಯದ ಮುಂಭಾಗದಲ್ಲಿ ಗಣೇಶ ಹಾಗೂ ವೀರಗಲ್ಲಿನ ತುಂಡು ಶಿಲ್ಪಾವಶೇಷಗಳು ಬಿದ್ದಿವೆ ಹಾಗೂ ವೀರಗಲ್ಲಿನ ತುಂಡು ಶಿಲ್ಪಾವಶೇಷಗಳು ಬಿದ್ದಿವೆ.

೩೪. ಗ್ರಾಮ : ಭೋಗಾನೂರು

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ೧೧-೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯ ಗರ್ಭಗೃಹ ಮತ್ತು ಸಭಾಮಮಂಟಪಗಳನ್ನು ಒಳಗೊಂಡಿದೆ. ದೇವಾಲಯ ಹಾಳು ಬಿದ್ದಿದೆ, ದೇವಾಲಯದ ವಾಸ್ತು ಮತ್ತು ಶಿಲ್ಪಾವಶೇಷಗಳು ಕಂಡುಬರುತ್ತವೆ.

ಗರ್ಭಗೃಹದಲ್ಲಿ ಹಳೆಯ ಲಿಂಗವಿದ್ದು, ಸಭಾಮಂಟಪದಲ್ಲಿ ನಂದಿಶಿಲ್ಪವಿದೆ. ಕಲ್ಮೇಶ್ವರ ದೇವಾಲಯದ ಮುಂದಿರುವ ನಂದಿಕಂಬದ ಮೇಲಿರುವ ಶಾಸನ ಸು. ೧೨ ಶತಮಾನಕ್ಕೆ ಸೇರಿದ್ದು ನಂದಿ ಕಂಬ ನಿಲ್ಲಿಸಿದ ಬಗ್ಗೆ ಉಲ್ಲೇಖಿಸುತ್ತದೆ.

೩೫. ಗ್ರಾಮ : ದಾಟನಾಳ

ಹೆಸರು : ಶರಣಬಸವೇಶ್ವರ ದೇವಾಲಯ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಉತ್ತರಾಭಿಮುಖ

ವಸ್ತು : ಕಲ್ಲು ಸಿಮೆಂಟ್

ಈ ದೇವಾಲಯವು ಆಧುನಿಕ ಶೈಲಿಯಲ್ಲಿದೆ ಗರ್ಭಗೃಹ, ನವರಂಗ ಸಭಾಮಂಪಟಗಳನ್ನು ಹೊಂದಿದ್ದು, ಗರ್ಭಗೃಹದಲ್ಲಿ ಬಸವೇಶ್ವರ ಮೂರ್ತಿಯನ್ನು ಕಾಣಲಾಗಿದೆ. ಇದು ಆಧುನಿಕ ಶೈಲಿಯಲ್ಲಿದೆ.ಈ ಊರಿನ ಜನರವಾಡಿಕೆಯ ಪ್ರಕಾರ ಕೆಲವಡೆಯಿಂದ ಬಿಟ್ಟು ಬಂದಿದ್ದರಿಂದ ಆ ಊರಿನ ಜನರು ಅರ್ಧ ಇಲ್ಲಿ ನೆಲಸಿದ್ದರಿಂದ ದಾಟವಾಳು ಎಂಬ ಹೆಸರಿನಿಂದ ಕರೆಯುತ್ತಾರೆ.

೩೬. ಗ್ರಾಮ : ನಾಗರಹಳ್ಳಿ

ಹೆಸರು : ಹನುಮಂತದೇವರಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಹೊಸದಾಗಿದ್ದು ಇದರ ಬಲಭಾಗದಲ್ಲಿ ಕುದುರೆಯ ಮೇಲೆ ಕುಳಿತು ವ್ಯಕ್ತಿಯು ಕತ್ತಿಯನ್ನು ಹಿಡಿದ ಚಿತ್ರಕಾಣಬಹುದು. ದೇವಾಲಯದ ಮುಖಭಾಗದಲ್ಲಿ ಶಾಸನವು ಬಿದ್ದಿದ್ದು ಅದರ ಪಕ್ಕದಲ್ಲಿ ಗೋಶಾಸನ ರೀತಿಯಲ್ಲಿ ಇರುವ ಕಲ್ಲೊಂದು ಇದ್ದು ವ್ಯಕ್ತಿಯೊರ್ವ ಧ್ಯಾನದಲ್ಲಿ ಕುಳಿತಿರುವಂತೆ ಕಂಡುಬರುತ್ತದೆ.

೨೭. ಗ್ರಾಮ : ಬಲ್ಲರವಾಡ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ಮಾಳಿಗೆ ಶೈಲಿಯ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಹಳೆಯ ಲಿಂಗವಿದೆ. ಹೊರಭಾಗದಲ್ಲಿ ಹಳೆಯ ನಂದಿ, ನಾಗ ಮತ್ತಿತರ ಶಿಲ್ಪಾವಶೇಷಗಳು ಕಂಡುಬರುತ್ತವೆ. ಇದರಿಂದಾಗಿ ಇಲ್ಲಿ ಹಳೆಯ ದೇವಾಲಯವಿದ್ದು ಅದು ಕಾಲಾಂತರದಲ್ಲಿ ಹಾಳಾಗಿರಬೇಕು.

೩೮. ಗ್ರಾಮ : ಬೆನ್ನೂರ

ಹೆಸರು : ಹನುಮಂತದೇವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಉತ್ತರಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಹೊಸದಾಗಿದ್ದು ಒಳಭಾಗದಲ್ಲಿ ಆಂಜನಯ್ಯ, ಲಿಂಗ, ಬಸವ ಮೂರ್ತಿಗಳು ಕಂಡುಬರುತ್ತವೆ. ದೇವಾಲಯದ ಎಡಭಾಗದಲ್ಲಿ ಶಾಸನ ಇದೆ. ಅದರ ಪಕ್ಕದಲ್ಲಿ ಗೋಶಾಸನ ಕಾಣಬಹುದು.

೩೯. ಗ್ರಾಮ : ಶಿಶುವಿನಹಳ್ಳಿ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಕೆರೆಹತ್ತಿರವಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಮಾಳಿಗೆ ಶೈಲಿಯ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಭಗ್ನಗೊಂಡಿರುವ ಲಿಂಗ ಮತ್ತು ನಂದಿಶಿಲ್ಪಗಳಿವೆ. ಭಗ್ನಗೊಂಡ ಭಾಗಗಳನ್ನು ಸಿಮೆಂಟಿನಿಂದ ತುಂಬಲಾಗಿದೆ. ದೇವಾಲಯವನ್ನು ದಕ್ಷಿಣದಿಂದ ಪ್ರವೇಶಿಸಬೇಕು. ಅಂದರೆ ಲಿಂಗ ಪೂರ್ವಭಿಮುಖವಾಗಿದ್ದರೂ, ದಕ್ಷಿಣ ಬಾಗಿಲನ್ನು ಇಡಲಾಗಿದೆ. ಇಲ್ಲಿ ಪ್ರಾಚೀನ ದೇವಾಲಯವಿದ್ದು, ಅದು ಬಿದ್ದು ಹೋದನಂತರ ಈಗಿನ ದೇವಾಲಯವನ್ನು ನಿರ್ಮಿಸಿಕೊಂಡಿದ್ದಾರೆ.

ಈ ಊರಲ್ಲಿ ರಾಷ್ಟ್ರಕೂಟರ ಒಂದನೇ ಅಮೋಘವರ್ಷನ ಕ್ರಿ.ಶ. ೮೭೨ ಶಾಸನವಿದ್ದು ಬೆಳ್ವೊಲ ಮೂನೂರರ ಅಧಿಕಾರಿ ದೇವಣ್ಣಯ್ಯನು ಶಿಶುಳಹಾಳದ ಬ್ರಾಹ್ಮಣರಿಗೆ ತುಪ್ಪದ ಮೇಲಿನ ಸುಂಕ ವಿನಾಯಿತಿ ಮಾಡಿದ ಉಲ್ಲೇಖವಿದೆ. ಕ್ರಿ.ಶ. ೧೨ ನೇ ಶತಮಾನದ ವೀರಗಲ್ಲೊಂದು ಗೋಗ್ರಹಣದ ಮತ್ತು ಶಿಶುವಿನಹಳ್ಳಿಯನ್ನು ಪ್ರಸ್ತಾಪಿಸಿದೆ. ಉಳಿದೆರಡು ಶಾಸನಗಳು ಕ್ರಮವಾಗಿ ೧೩ ಮತ್ತು ೧೫ ನೇ ಶತಮಾನಕ್ಕೆ ಸೇರಿದ್ದು, ದಾನಗಳನ್ನು ಉಲ್ಲೇಖಿಸುತ್ತವೆ. ಈ ಶಾಸನಗಳಿಂದ ಶಿಶುವಿನಹಳ್ಳಿ ಗ್ರಾಮವು ಪ್ರಾಚೀನ ಕಾಲದಿಂದಲೂ ಮಹತ್ವದ ಸ್ಥಳವಾಗಿರುವುದು ಕಂಡುಬರುತ್ತದೆ. ಈ ಊರಲ್ಲಿ ಮತ್ತೊಂದು ಹನುಮಂತ ದೇವರ ಗುಡಿ ಇದೆ. ದೇವಾಲಯ ಮುಂಭಾಗದಲ್ಲಿ ಕಮಾನಿನಾಕಾರದ ಬಾಗಿಲು ದ್ವಾರವಿದ್ದು ಒಳಭಾಗದಲ್ಲಿ ಹೊಸ ದೇವರ ಮೂರ್ತಿ ಕಂಡುಬರುತ್ತದೆ. ಇದು ಆಧುನಿಕ ಶೈಲಿಯಲ್ಲಿದೆ.

೪೦. ಗ್ರಾಮ : ಮಣಕವಾಡ

ಹೆಸರು : ಕಲ್ಮೇಶ್ವರ ಗುಡಿ

ಸ್ಥಳ : ಕೆರೆ ಹತ್ತಿರವಿದೆ.

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಸ್ಥಳೀಯ ಶೈಲಿಯಲ್ಲಿರುವ ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಪ್ರಾಚೀನ ಲಿಂಗ, ಹೊರಭಾಗದಲ್ಲಿ ವೀರಗಲ್ಲು ಶಾಸನ ಮತ್ತು ಮತ್ತಿತರ ಶಿಲ್ಪಾವಶೇಷಗಳಿವೆ. ದೇವಾಲಯದ ಬಳಿ ಗೋಶಾಸದ ಕಲ್ಲುಗಳು ಸಹ ಕಂಡುಬರುತ್ತವೆ. ಇಲ್ಲಿನ ಶಿಲ್ಪಾವಶೇಷಗಳು ಇಲ್ಲಿ ಪ್ರಾಚೀನ ದೇವಾಲಯವಿತ್ತೆಂದು ಸ್ಪಷ್ಟಪಡಿಸುತ್ತವೆ.

ಈ ಊರಿನ ಮಠದ ಹಾಗೂ ಶಾಲೆಯ ಸುತ್ತಮುತ್ತಲೂ ಗೋಶಾಸ ಕಂಡುಬರುತ್ತದೆ. ಇಲ್ಲಿನ ಕೆರೆಯ ದಂಡೆಯ ಪಕ್ಕದಲ್ಲಿ ಎರಡು ಗೋಶಾಸನಗಳು ಕಂಡುಬರುತ್ತವೆ.

೪೧. ಗ್ರಾಮ : ಮಜ್ಜಿಗುಡ್ಡ

ಹೆಸರು : ಈಶ್ವರ ಗುಡಿ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪಶ್ಚಿಮ

ವಸ್ತು : ಕಪ್ಪುಶಿಲೆ

(ಪ್ರಕಟಣೆ ಮಹಾದೇವ ಸಿ., ೨೦೦೬ ಪುಟ ೧೪೭)

ಈ ದೇವಾಲಯವು ಕ್ರಿ.ಶ. ೧೯೬೦ ರ ಸುಮಾರಿನಲ್ಲಿ ನಿರ್ಮಿಸಿದ ಕೊಠಡಿಯಲ್ಲಿ ಹಳೆಯ ಲಿಂಗ ಮತ್ತು ನಂದಿಶಿಲ್ಪಗಳಿವೆ. ಹೊರಭಾಗದಲ್ಲಿ ಕಲ್ಯಾಣದ ಚಾಲುಕ್ಯ ಶಾಸನ, ನಾಗಶಿಲ್ಪಗಳು ಮತ್ತು ಹಳೆಯ ದೇವಾಲಯದ ಸ್ತಂಭ ಮತ್ತಿತರ ವಾಸ್ತು ಅವಶೇಷಗಳಿವೆ.

೪೨. ಗ್ರಾಮ : ಕಿತ್ತೂರು

ಹೆಸರು : ಕಲ್ಲೇಶ್ವರ

ಸ್ಥಳ : ತಿರ್ಲಾಪುರ ಜಮೀನಿನಲ್ಲಿದೆ

ಕಾಲ : ಕ್ರಿ.ಶ. ೧೧-೧೨ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈಗ ದೇವಾಲಯವಿಲ್ಲ ಆದರೆ ಹೊಲದ ನಡುವೆ ಉತ್ತರ ಸ್ಥಳದಲ್ಲಿ ಪ್ರಾಚೀನ ಕಾಲಕ್ಕೆ ಸೇರಿದ ಲಿಂಗ

ಹಾಗೂ ಭಗ್ನಗೊಂಡಿರುವ ಶಿಲ್ಪಾವಶೇಷಗಳು ಕಂಡುಬರುತ್ತವೆ. ಈ ಎಲ್ಲಾ ಅವಶೇಷಗಳಿಂದ ಇಲ್ಲಿ ಕಲ್ಯಾಣದ ಚಾಲುಕ್ಯರಕಾಲದ ಶಿವಾಲಯ ಇತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ಇಂದಿಗೂ ಶಿಲ್ಪಾವಶೇಷಗಳು ಅದೇ ಸ್ಥಳದಲ್ಲಿವೆ.

ಇದೇ ಊರಿನಲ್ಲಿ ಹನುಮಂತ ದೇವರ ಗುಡಿ ಸ್ವಲ್ಪ ಹಳೆಯದಾಗಿದ್ದು ದೇವಾಲಯದ ಎಡಭಾಗದಲ್ಲಿ ಜೈನಶಿಲ್ಪವಿದ್ದು ಬಲಭಾಗದಲ್ಲಿ ಶಾಸನ ಕಂಡುಬರುತ್ತದೆ. ಜೈನ ಶಿಲ್ಪ ಸುಮಾರು ೪ ಅಡಿ ಎತ್ತರವಿದೆ, ಇದು ಈ ಊರಿನಲ್ಲಿದ್ದ ಬಸದಿಯ ಬಗ್ಗೆ ಸೂಚನೆ ನೀಡುತ್ತದೆ.

೪೩. ಗ್ರಾಮ : ಆಹೆಟ್ಟಿ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ.

ಕಾಲ : ಆಧುನಿಕ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಮಣ್ಣಿನ ಹಳೆಯ ದೇವಾಲಯವನ್ನು ಕೆಡವಿ ಈಗಿನ ದೇವಾಲಯವನ್ನು ನಿರ್ಮಿಸಿದ್ದಾರೆ. ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಹೊಸ ಶಿವಲಿಂಗ ಮತ್ತು ನಂದಿಯನ್ನು ಪ್ರತಿಷ್ಠಾಪಿಸಿದ್ದಾರೆ. ಹೊರಭಾಗದಲ್ಲಿರುವ ಕಟ್ಟೆಯಲ್ಲಿ ಹಳೆಯ ಲಿಂಗ, ನಂದಿ, ಗಣಪತಿ ವಿಷ್ಣು ನಾಗ (ಮೂರು) ಮತ್ತು ಪಾರ್ಶ್ವನಾಥ ಶಿಲ್ಪಗಳನ್ನು ಕ್ರಮವಾಗಿ ಇಡಲಾಗಿದೆ. ಈ ಪ್ರಾಚೀನ ಶಿಲ್ಪಾವಶೇಷಗಳಿಂದ ಇಲ್ಲಿ ಪ್ರಾಚೀನ ಶಿವಾಲಯ ಇತ್ತೆಂಬುದು ಸ್ಪಷ್ಟವಾಗುತ್ತದೆ ಹಾಗೂ ದೇವಾಲಯವು ಮೂರನೆಯ ಬಾರಿಗೆ ಪುನಃನಿರ್ಮಾಣಗೊಂಡಿರುವುದನ್ನು ಗ್ರಹಿಸಬಹುದು.

೪೪. ಗ್ರಾಮ : ಆಹೆಟ್ಟಿ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ.

ಕಾಲ : ಆಧುನಿಕ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು

ಮಣ್ಣಿನಿಂದ ನಿರ್ಮಿಸಿದ್ದ ದೇವಾಲಯ ಬಿದ್ದು ಹೋಗಿದೆ. ಗರ್ಭಗೃಹದಲ್ಲಿ ಹಳೆಯ ಲಿಂಗವಿದೆ. ಹೊರಗಿರುವ ನಂದಿ ಇತ್ತೀಚಿನದು. ವಿಷ್ಣು ಮತ್ತಿತರ ಪ್ರಾಚೀನ ಶಿಲ್ಪಾವಶೇಷಗಳು ಮಣ್ಣಿನಲ್ಲಿ ಬಿದ್ದಿವೆ. ಇಲ್ಲಿ ಮೊದಲಿಗೆ ಕಲ್ಲಿನ ದೇವಾಲಯವಿದ್ದು ಅದು ಬಿದ್ದು ಹೋದನಂತರ ಮಣ್ಣಿನ ದೇವಾಲಯವನ್ನು ನಿರ್ಮಿಸಲಾಯಿತು. ಇತ್ತೀಚೆಗೆ ಅದು ಸಹ ಹಾಳುಬಿದ್ದಿದೆ.

ಮೂರುನೆಯ ಬಾರಿಗೆ ಮೇಲಿನ ದೇವಾಲಯ ನಿರ್ಮಾಣವಾಗಬೇಕಾಗಿದೆ ಹೀಗಾಗಿ ದೇವಾಲಯಗಳು ಆಗಾಗ್ಗೆ ಜೀರ್ಣೋದ್ಧಾರ ಕ್ರಿಯೆಗೆ ಒಳಗಾಗುತ್ತವೆ. ಅಲ್ಲದೇ ನಿರ್ಮಾಣ ಸಾಮಾಗ್ರಿಗಳು ಸಹ ಕಾಲಕಾಲಕ್ಕೆ ಬದಲಾಗುವುದನ್ನು ಮನಗಾಣಬಹುದು. ಅದು ಯಾವುದೇ ರೂಪ ಪಡೆದರೂ ಅಲ್ಲಿರುವ ಶಿಲ್ಪಾವಶೇಷಗಳಿಂದಾಗಿ ದೇವಾಲಯದ ಪ್ರಾಚೀನತೆಯನ್ನು ನಿರ್ಧರಿಸಬಹುದಾಗಿದೆ.

೪೫. ಗ್ರಾಮ : ಸಾಸ್ವಿಹಳ್ಳಿ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ.

ಕಾಲ : ೧೩ನೆಯ ಶತಮಾನ.

ರಾಜವಂಶ/ಮಂಡಳಿಕ : ವಿಜಯನಗರ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯ ಹಳೆಯದಾಗಿದ್ದು ಇದರ ಗೋಪುರ ವಿಜಯನಗರ ಕಾಲವನ್ನು ಹೊಲುತ್ತವೆ. ಇದರ ಸಮೀಪ ಹನುಮಂತ ದೇವಾಲಯದ ಮುಂಭಾಗದಲ್ಲಿ ಒಂದು ಅಡ್ಡಬಿದ್ದಿರುವ ಕಲ್ಲಿನ ಮೇಲೆ ಲಿಪಿಗಳು ಕಂಡುಬರುತ್ತವೆ.

೪೬. ಗ್ರಾಮ : ಅರೆಕುರಹಟ್ಟಿ

ಹೆಸರು : ಕಲ್ಮೇಶ್ವರ

ಸ್ಥಳ : ಕೆರೆದಂಡೆಯಲ್ಲಿದೆ

ಕಾಲ : ೧೧ ನೆಯ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಕಟ್ಟಿಗೆ, ಮಣ್ಣು,

(ಪ್ರಕಟಣೆ ಮಹಾದೇವ ಸಿ, ೨೦೦೬ ಪುಟ ೧೨೮)

ಹಳೇ ದೇವಾಲಯ ಕೆಡವಿ ಇತ್ತೀಚೆಗೆ ಹೊಸ ದೇವಾಲಯ ನಿರ್ಮಾಣವಾಗಿದೆ. ಗರ್ಭಗೃಹದಲ್ಲಿ ಸುಮಾರು ೨.೫ ಅಡಿ ಎತ್ತರದ ಪ್ರಾಚೀನ ಲಿಂಗವಿದೆ. ನಂದಿಶಿಲ್ಪ ಇತ್ತೀಚಿನದು. ಈ ದೇವಾಲಯವನ್ನು ಊರಿನ ಶಾನಭೋಗರಾವ್ ದತ್ತಪ ಎಂಬುವರು ನಿರ್ಮಿಸಿಕೊಟ್ಟಿದ್ದಾರೆ.

೪೭. ಗ್ರಾಮ : ಅರೆಕುರಹಟ್ಟಿ

ಹೆಸರು : ಹನುಮಂತ

ಸ್ಥಳ : ಊರನಡುವೆಯಿದೆ.

ಕಾಲ : ೧೧ ಮತ್ತು ೧೨ನೆ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಇದು ಕೂಡ ಹಳೇದೇವಾಲಯ ನಾಶವಾಗಿದ್ದು ಹೊಸ ದೇವಾಲಯ ನಿರ್ಮಾಣವಾಗಿದೆ. ದೇವಾಲಯದ ಮುಂಭಾಗದಲ್ಲಿ ಆಂಜನೇಯಮೂರ್ತಿ ಇದೆ. ದೇವಾಲಯ ಮುಂಭಾಗದಲ್ಲಿ ಮಕರತೋರಣವಿದ್ದು ಮಧ್ಯಭಾಗದಲ್ಲಿ ಗಜಲಕ್ಷ್ಮೀ ಮೂರ್ತಿ ಇದೆ. ಇಲ್ಲಿನ ಈ ಶಾಸನ ಪ್ರಕಾರ ಪ್ರಾಚೀನ ಹೆಸರು ಕವಲೇಶ್ವರ ಎಂದಿರಬಹುದು. ಕೆಲವು ಶಿವಾಲಯಗಳಲ್ಲಿ ನಂದಿಯನ್ನೆ ಹೆಚ್ಚು ಪೂಜಿಸಲಾಗಿ ಅಂತಹ ದೇವಾಲಯಗಳನ್ನು ಬಸವಣಗುಡಿ ಎಂದು ಕರೆಯುವ ವಾಡಿಕೆ ಇದೆ.

೪೮. ಗ್ರಾಮ : ಅರೆಕುರಹಟ್ಟಿ

ಹೆಸರು : ಬಸವಣ್ಣ

ಸ್ಥಳ : ಊರನಡುವೆಯಿದೆ.

ಕಾಲ : ೧೧ ಮತ್ತು ೧೨ ನೇ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಮಾಳಿಗೆ ಕಟ್ಟಡದ ದೇವಾಲಯವಿದ್ದು ಗರ್ಭಗೃಹ ಬಿದ್ದು ಹೋಗಿದ್ದು, ಸಭಾಮಂಟಪ ಭಗ್ನಗೊಂಡಿದೆ. ಗರ್ಭಗೃಹದಲ್ಲಿ ಹಳೆಯ ಲಿಂಗವಿದ್ದು, ನಂತರದ ಕಾಲದ ನಂದಿಶಿಲ್ಪವಿದೆ. ಇತರ ಶಿಲ್ಪಾವಶೇಷಗಳು ಮಣ್ಣಿನಲ್ಲಿ ಸೇರಿವೆ. ಮುಂಭಾಗದಲ್ಲಿ ಕಾರ್ತಿಕೇಯನ ಎರಡು ಶಿಲ್ಪಗಳು, ಬ್ರಹ್ಮ, ನಂತರದ ಕಾಲದ ಗೋಪಾಲಕೃಷ್ಣ ಶ್ರೀದೇವಿ ಮತ್ತು ಭೂದೇವಿಯರ ಶಿಲ್ಪಾವಶೇಷಗಳು ಕಂಡುಬರುತ್ತವೆ. ವೀರಭದ್ರ ದೇವಾಲಯದ ಮುಂಭಾಗದಲ್ಲಿ ಗಣಪತಿ ಮತ್ತಿತರ ಶಿಲ್ಪಾವಶೇಷಗಳಿವೆ. ಈ ಎಲ್ಲ ಶೈವವಶೇಷಗಳಿಂದ ಇಲ್ಲಿ ಕ್ರಿ.ಶ. ೧೧, ೧೨ ನೆಯ ಶತಮಾನದ ಶಿವಾಲಯವಿತ್ತೆಂದು ಗ್ರಹಿಸಬಹುದು.

೪೯. ಗ್ರಾಮ : ಹಾಳಕುಸುಗಲ್ಲು

ಹೆಸರು : ಸಿದ್ಧಲಿಂಗೇಶ್ವರ

ಸ್ಥಳ : ಕೆರೆಹತ್ತಿರವಿದೆ.

ಕಾಲ : ೧೧ ಮತ್ತು ೧೨ ನೆ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ

ದಿಕ್ಕು : ಪಶ್ಚಿಮ

ವಸ್ತು : ಕಪ್ಪುಶಿಲೆ

ಇದೀಗ ದೇವಾಲಯದ ಗರ್ಭಗೃಹ ಮತ್ತು ಸಭಾಮಂಟಪವು ಜೀರ್ಣೋದ್ಧಾರವಾಗಿದೆ. ಹಳೆಯ ಲಿಂಗ,

ನಂದಿ, ನಾಗ ಮತ್ತಿತರ ಭಗ್ನಾವಶೇಷಗಳು ಹೊರಭಾಗದಲ್ಲಿದೆ. ಇಲ್ಲಿರುವ ಶಾಸನ ಕಲ್ಯಾಣದ ಚಾಲುಕ್ಯರ ಕಾಲಕ್ಕೆಸೇರಿದ್ದು ಅಕ್ಷರಗಳು ಸವೆದಿವೆ. ಈ ಎಲ್ಲಾ ಪ್ರಾಚ್ಯವಶೇಷಗಳಿಂದ ಇಲ್ಲಿ ಕಲ್ಯಾಣದ ಚಾಲುಕ್ಯ ಕಾಲಕ್ಕೆ ಸೇರಿದ ದೇವಾಲಯವಿತ್ತೆಂದು ಸ್ಪಷ್ಟವಾಗುವುದು.

೫೦. ಗ್ರಾಮ : ಹಾಳುಕುಸುಗಲ್ಲ
ಹೆಸರು : ಹೀರೆಮಠ
ಸ್ಥಳ : ಊರಹೊರಗೆಯಿದೆ.
ಕಾಲ : ೧೧ ಮತ್ತು ೧೨ ಶತಮಾನ
ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯ
ದಿಕ್ಕು : ಪೂರ್ವಾಭಿಮುಖ
ವಸ್ತು : ಕ್ಲೋರೈಟಿಕ್ ಶಿಲೆ

ಈ ಹಿರೇಮಠ ಊರಿನ ಹೊರಗಡೆ ಇದೆ. ಪ್ರಸ್ತುತ ಮಠ ಹಾಳುಬಿದ್ದು ಈ ಮಠದ ಮುಂಭಾಗದಲ್ಲಿ ಬೇವಿನ ಮರದ ಕೆಳಗೆ ಶಿಲಾಶಾಸನ, ಸವೆದಿದೆ. ಈ ಶಾಸನದಲ್ಲಿ ನವಲಗುಂದ ಹಿರೇಮಠ ಎಂಬ ಉಲ್ಲೇಖಕಂಡುಬರುತ್ತದೆ. ಇದು ೨ ೧/೨ ಅಡಿ ಎತ್ತರ ೧ ೧/೨ ಅಗಲ ಇದೆ, ಇದು ಮೇಲುಭಾಗ ಒಡೆದು ಸೀಳುಹೋಗಿದೆ.

೫೧. ಗ್ರಾಮ : ಹಾಳುಕುಸುಗಲ್ಲ
ಹೆಸರು : ಹನುಮಂತ
ಸ್ಥಳ : ಊರನಡುವೆಯಿದೆ.
ಕಾಲ : ಆಧುನಿಕ
ದಿಕ್ಕು : ಉತ್ತರಾಭಿಮುಖ
ವಸ್ತು : ಕಪ್ಪುಶಿಲೆ

ಈ ದೇವಾಲಯವು ಕೂಡ ಹೊಸ ಮಾದರಿಯಲ್ಲಿ ಕಂಡುಬಂದಿದ್ದು ಗರ್ಭಗೃಹದಲ್ಲಿ ಆಂಜನೇಯನ ಮೂರ್ತಿ ಇದೆ.

ಈ ಊರಲ್ಲಿ ಒಂದು ವೀರಗಲ್ಲು ತೃಟಿತವಾಗಿದ್ದು ವೀರನೊಬ್ಬನ ಹೋರಾಟ ಮತ್ತು ಮರಣವನ್ನು ಉಲ್ಲೇಖಿಸುತ್ತದೆ. ದೇವಾಲಯದ ಬಲಭಾಗದಲ್ಲಿ ಶಿಲಾಮೂರ್ತಿಗಳು ಬಿದ್ದಿದ್ದು ಇದರಲ್ಲಿ ಜೈನ ಮೂರ್ತಿಯ ಶಿಲ್ಪ ನಿಂತಿರುವ ಭಂಗಿಯಲ್ಲಿ ಕಂಡುಬಂದಿದೆ. ಮತ್ತೊಂದು ವೀರಗಲ್ಲು ಮಹದೇವಪ್ಪ ಮಲ್ಲಪ್ಪ ಹೊಳೆಗಾರ್ ಮನೆಯ ಮುಂದೆ ಇದೆ. ಈ ಕಲ್ಲಿನಲ್ಲಿ ಯುದ್ಧದ ಸನ್ನಿವೇಶಕಂಡುಬಂದು ವೀರನೊಬ್ಬನು ಹೋರಾಟಕ್ಕೆ ನಿಂತಿರುವುದನ್ನು ತಿಳಿಸಿಕೊಡುತ್ತದೆ.

೫೨. ಗ್ರಾಮ : ತಿರ್ಲಾಪುರ
ಹೆಸರು : ಮಾರುತಿ

ಸ್ಥಳ : ಊರನಡುವೆಯಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಮಾರುತಿ ದೇವಸ್ಥಾನ ಆವರಣದಲ್ಲಿ ಲಕ್ಷ್ಮೀನಾರಾಯಣ ವೀರಭದ್ರ, ಈಶ್ವರ, ವಿಘ್ನೇಶ್ವರ, ಪಾಡುರಂಗ ಹೇಮರಡ್ಡಿ ಮಲ್ಲಮ್ಮ ದೇವಾಲಯಗಳಿವೆ. ಈ ದೇವಾಲಯವನ್ನು ಮರದ ಜಂತಿ, ತೊಲೆ ಮತ್ತು ಕಂಬಗಳನ್ನು ಬಳಸಿ ನಿರ್ಮಿಸಲಾಗಿದೆ. ಆವರಣದ ಪ್ರವೇಶದ್ವಾರ ದಕ್ಷಿಣಕ್ಕಿದೆ.

ಮೇಲೆ ಹೇಳಿದ ಗುಡಿಗಳಲ್ಲಿರುವ ಶಿಲ್ಪಗಳು ಇತ್ತೀಚಿನವು. ಇದೇ ಆವರಣದಲ್ಲಿರುವ ಬನ್ನಿ ಮರದ ಕೆಳಗೆ ಸೂರ್ಯನ ಪಾಣಿಪೀಠ, ನಂದಿ ಮತ್ತಿತರ ಪ್ರಾಚೀನ ಶಿಲ್ಪಾವಶೇಷಗಳಿವೆ. ಇದರಿಂದ ಇಲ್ಲಿ ಪ್ರಾಚೀನ ದೇವಾಲಯವಿತ್ತೆಂಬುದು ಸ್ಪಷ್ಟ. ಈದೇವಾಲಯಗಳ ಮುಂಭಾಗದಲ್ಲಿ ಗರುಡ ಸ್ತಂಭವಿದ್ದುದು ಕಂಡುಬಂದಿದೆ. ಈ ಸ್ಥಂಭದ ಮೇಲೆ ಹಬ್ಬಹರಿದಿನಗಳಲ್ಲಿ ದೀಪವನ್ನು ಹಚ್ಚಿಹಿಡುವ ಸಂಪ್ರದಾಯವಿದೆ. ಈ ಊರಿನ ದಕ್ಷಿಣಭಾಗದಲ್ಲಿ ಹೊಲದಲ್ಲಿ ಶಾಸನ ಕಂಡುಬಂದು ಇದರಲ್ಲಿ ಭೂದಾನದ ಉಲ್ಲೇಖ ಕಾಣಬಹುದು.

೫೩. ಗ್ರಾಮ : ಮೊರಬ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ

ಕಾಲ : ೧೧ ಮತ್ತು ೧೨ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯರು

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಕಲ್ಮೇಶ್ವರ ದೇವಾಲಯವು ಜೀರ್ಣೋದ್ಧಾರವಾಗಿರುವದರಿಂದ ಗೋಡೆಯ ಮೇಲೆ ಇರುವ ಶಾಸನ ಮರೆಮಾಚುವಂತೆ ಆಗಿದೆ. ಗರ್ಭಗೃಹದಲ್ಲಿ ಲಿಂಗ ಇದೆ. ಮೊದಲಿದ್ದ ಹಳೆಯ ಲಿಂಗವನ್ನು ಗರ್ಭಗೃಹ ನೆಲದಲ್ಲಿ ಹುಗಿದು ಅದರ ಮೇಲೆ ಹೊಸ ಲಿಂಗವನ್ನು ಪ್ರತಿಷ್ಠಾಪಿಸಿರುವುದಾಗಿ ಸ್ಥಳೀಯರು ತಿಳಿಸುತ್ತಾರೆ.

ಇಲ್ಲಿರುವ ಎರಡು ಶಾಸನಗಳ ಕ್ರಿ.ಶ. ೧೧-೧೨ ನೆಯ ಶತಮಾನಗಳಿಗೆ ಸೇರಿದ್ದು, ಕ್ರಮವಾಗಿ ನೊಳಂಬ ಸಮುದ್ರಕ್ಕೆ ಕೆರೆಗೆ ಬಿಟ್ಟ ಭೂದಾನವನ್ನು ಉಲ್ಲೇಖಿಸುತ್ತದೆ. (S.I.I, xi-ii-124 xv : 588) ಊರಿನ ಉಳಿದ ಶಾಸನಗಳು ಜೈನಮತಿಯ ನಿಷಧಿ ಮತ್ತು ಭೂದಾನಗಳನ್ನು ಪ್ರಾಸ್ತಾವಿಸುತ್ತವೆ. ಈ ಎಲ್ಲಾ ಪ್ರಾಚ್ಯವಶೇಷಗಳಿಂದ ಇಲ್ಲಿ ಕಲ್ಯಾಣದ ಚಾಲುಕ್ಯರ ಕಾಲದ ದೇವಾಲಯ ವಿತ್ತೆಂಬುದು ಸ್ಪಷ್ಟವಾಗುತ್ತದೆ.

ಈ ದೇವಾಲಯದ ಎಡಭಾಗದಲ್ಲಿ ವೀರಭದ್ರ ದೇವಾಲಯವಿದೆ. ಇದರ ಎದುರು ಭಾಗದಲ್ಲಿ ಕಲ್ಮೇಶ್ವರ ದೇವಾಲಯದ ಮುಂದೆ ಇರುವ ಶಾಸನ, ಕಲ್ಯಾಣದ ಚಾಲುಕ್ಯರ ಜಯಸಿಂಘದೇವ ಯುವರಾಜನಾಗಿದ್ದಾಗ ನೊಳಂಬ ಸಮುದ್ರ ಕೆರೆಗೆ ಬಿಟ್ಟ ಭೂದಾನದವನ್ನು ಉಲ್ಲೇಖಿಸುತ್ತದೆ. ಕಲ್ಮೇಶ್ವರ ದೇವಾಲಯದ ಬಲಭಾಗದಲ್ಲಿ

ನರಸಿಂಹ ದೇವಾಲಯವನ್ನು ಕಾಣಬಹುದು ಆದರೆ ಧಾರವಾಡ ಶಾಸನ ಸೂಚಿಯಲ್ಲಿ ಉಲ್ಲೇಖಿಸಿರುವ ಕಲ್ಮೇಶ್ವರ ದೇವಾಲಯದ ಗೋಡೆ ಮೇಲೆ ಇರುವ ಶಾಸನ ಕಾಣೆಯಾಗಿದೆ.

೫೪. ಗ್ರಾಮ : ಮೊರಬ

ಹೆಸರು : ಹನುಮಂತ

ಸ್ಥಳ : ಊರನಡುವೆಯಿದೆ

ಕಾಲ : ೧೧ ಮತ್ತು ೧೨ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣದ ಚಾಲುಕ್ಯರು

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯ ಎರಡು ಗರ್ಭಗೃಹ ಹೊಂದಿದೆ ಇದರ ಮುಂಭಾಗದಲ್ಲಿ ಆವರಣಕ್ಕೆಸೇರಿದಂತೆ ಎರಡು ಶಾಸನಗಳನ್ನು ಸ್ತಂಭಗಳಾಗಿ ಮಾಡಿಕೊಂಡಿದ್ದಾರೆ ಇದರಲ್ಲಿ ಒಂದು ಭೂದಾನ ಉಲ್ಲೇಖ ಇನ್ನೊಂದು ನಾಗಚಂದ್ರದೇವರ ಮುನಿನಿಷಧಿ ಇದೆ. ಅಕ್ಷರಗಳು ಒಂದು ಶಾಸನದಲ್ಲಿ ಸಂಪೂರ್ಣ ಸವೆತಕ್ಕೆ ಒಳಗಾಗಿದ್ದು ಇನ್ನೊಂದು ಅಸ್ಪಷ್ಟವಾಗಿದೆ.

೫೫. ಗ್ರಾಮ : ಮೊರಬ

ಹೆಸರು : ಬಸವಣ್ಣ

ಸ್ಥಳ : ಊರಕೊನೆಯಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯವು ಆಧುನಿಕವಾಗಿದ್ದು ಗರ್ಭಗೃಹದಲ್ಲಿ ಬಸವಮೂರ್ತಿ ಇದೆ. ಇದರ ಮುಂಭಾಗದಲ್ಲಿ ಶಾಸನವಿದ್ದು ಭೂದಾನವನ್ನು ಉಲ್ಲೇಖಿಸುತ್ತದೆ.

ಮೊರಬ ಎಂಬ ಹೆಸರು ಸ್ಥಳೀಯರ ಅಭಿಪ್ರಾಯದ ಪ್ರಕಾರ ಯೋಗಿಯೊರ್ವನು ಊರಿನ ಹೊರಭಾಗದಲ್ಲಿ ಜ್ಞಾನಾಸಕ್ತನಾಗಿ ಮರಣ ಎಂಬ ಮಾತುಗಳಿಂದ ಪ್ರಚೋದನೆಗೊಂಡ ಮುಳ್ಳಿನ ಮರವೊಂದು ಆತನ ನೆರಳಿಗಾಗಿ ಸನಿಸಹಕ್ಕೆ ಹೋಯಿತು ಆಗಿನಿಂದ ಈ ಊರು ಬೆಳೆಯುತ್ತಾ ಮೊರಬ ಎಂಬ ಹೆಸರು ಬಂದಿತು ಎಂಬುದು ಪ್ರತೀತಿ.

೫೬. ಗ್ರಾಮ : ತಲೆಮೊರಬ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಪ್ರಕಟಣೆ ಸಿ.ಮಹಾದೇವ ೨೦೦೬, ಪುಟ ೧೩೫

ದೇವಾಲಯ ಗರ್ಭಗೃಹ ಮತ್ತು ಸಭಾಮಂಟಪ ಹೊಂದಿದೆ. ಗರ್ಭಗೃಹದಲ್ಲಿ ಲಿಂಗ ಮತ್ತು ವಿಷ್ಣುವಿನ ಶಿಲ್ಪವಿದೆ, ಗರ್ಭಗೃಹದ ಎಡಭಾಗದ ಗೋಡೆಯಲ್ಲಿ ಗಜಲಕ್ಷ್ಮಿ ಶಿಲ್ಪ ಕಂಡುಬಂದಿದೆ. ಉಳಿದಂತೆ ದೇವಾಲಯವು ಶಿಸ್ತಾದ ಮರದ ಜಂತಿ, ತೊಲೆ ಮತ್ತು ಸ್ತಂಭಗಳಿವೆ. ಮುಂಭಾಗದಲ್ಲಿರುವ ಪ್ರವೇಶ ದ್ವಾರವು ಆವರಣ ಭಿತ್ತಿಯಿಂದ ಕೂಡಿದೆ.

ಗರ್ಭಗೃಹದಲ್ಲಿ ಪ್ರಾಚೀನ ಲಿಂಗವಿದೆ. ಇಲ್ಲಿರುವ ಲಿಂಗದ ರಂಧ್ರಭಾಗವನ್ನು ಕಾಶಿಯಿಂದ ತಂದಿರುವ ಪ್ರತೀತಿ ಇದೆ. ಸಭಾಮಂಟಪದಲ್ಲಿರುವ ನಂದಿಶಿಲ್ಪ ಇತ್ತೀಚಿನದು ಈ ದೇವಾಲಯದ ಹತ್ತಿರವಿರುವ ಲಿಂಗಗಳು ಕಂಡುಬರುತ್ತವೆ. ಈ ಎಲ್ಲಾ ಶಿಲ್ಪಾವಶೇಷಗಳು ಪ್ರಾಚೀನ ಶಿವಾಲಯ ಇತ್ತೆಂಬುದನನಲು ಸ್ಪಷ್ಟಪಡಿಸುತ್ತವೆ.

೫೭. ಗ್ರಾಮ : ತಲೆಮೊರಬ

ಹೆಸರು : ಪಂಚಮುಖಿ ಹನುಮಂತ

ಸ್ಥಳ : ಊರನಪ್ರಾರಂಭದಲ್ಲಿದೆ

ಕಾಲ : ಕ್ರಿ.ಶ.ಸು. ೧೨ ಶತಮಾನ

ದಿಕ್ಕು : ಪಶ್ಚಿಮಾಭಿಮುಖ

ವಸ್ತು : ಕಪ್ಪುಶಿಲೆ

ದೇವಾಲಯದ ಬಲಗೋಡೆಯಲ್ಲಿ ಪಂಚಭಾಷೆಯ ಶ್ರೀದತ್ತಾತ್ರೇಯ ಆವದೂತ ಎಂದು ಬರೆದಿದೆ. ಇದರ ಕಾಲ ೧೮೪೧ ದೇವಾಲಯವು ಗರ್ಭಗೃಹ, ಪ್ರದಕ್ಷಣಪಥ, ಸಭಾಮಂಟಪ, ಎರಡುಭಾಗದಲ್ಲಿ ಕಮಾನಿನಾ ಕೃತಿಹೊಂದಿದ್ದು ಆನೆ ಮತ್ತು ಮುಖದ ಛಾಯ ಹೊಂದಿದ್ದು ಗರ್ಭಗೃಹ ಒಳಭಾಗದಲ್ಲಿ ಪಂಚಮುಖದ ಆಂಜನೇಯನ ಮೂರ್ತಿ ಇದೆ.

೫೮. ಗ್ರಾಮ : ಶಿರೂರ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ

ಕಾಲ : ೧೩ ನೆ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ದೇವಾಲಯ ಹೊಸಮಾದರಿಯಲ್ಲಿ ನಿರ್ಮಾಣವಾಗಿದೆ. ಇಲ್ಲಿ ಶಾಸನ ಮತ್ತು ಮೂರು ಹಂತದ ಉಬ್ಬುಶಿಲ್ಪಗಳಿವೆ. ಶಾಸನದ ಅಕ್ಷರಗಳು ಸವೆದಿವೆ. ಮೂರು ಹತಂದಲ್ಲಿ ನೇಗಿಲು ಹಾಗೂ ಗೋವು ಮತ್ತು

ಗೋವಿನ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ. ಅಲ್ಲದೆ ನಾಗರಾಜ ಮತ್ತಿತರ ದೇವತೆಗಳ ಅಪೂರ್ಣ ಶಿಲ್ಪಾವಶೇಷಗಳಿದ್ದು ಪ್ರಾಚೀನ ದೇವಾಲಯವಿತ್ತೆಂಬುದು ಸ್ಪಷ್ಟವಾಗುತ್ತದೆ. ದೇವಾಲಯದಿಂದ ಸುಮಾರು ೨೦೦ ಅಡಿಗಳಷ್ಟು ದೂರದಲ್ಲಿ ಗ್ರಾಮ ಪಂಚಾಯತಿಯ ಮುಂಭಾಗದಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಸೇರಿದ ತೃಟಿತ ಶಾಸನ ಇದೆ.

೬೨. ಗ್ರಾಮ : ಗುಮ್ಮಗೋಳ

ಹೆಸರು : ರಾಮಲಿಂಗೇಶ್ವರ ದೇವಾಲಯ

ಸ್ಥಳ : ಊರನಡುವೆಯಿದೆ

ಕಾಲ : ಕ್ರಿ.ಶ. ೧೭ಮತ್ತು ೧೮ ನೆ ಶತಮಾನ

ರಾಜವಂಶ/ಮಂಡಳಿಕ : ವಿಜಯನಗರೋತ್ತರ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯ ಜೀರ್ಣೋದ್ಧಾರ ಸ್ಥಿತಿಯಲ್ಲಿದೆ. ಎರಡು ಗರ್ಭಗೃಹಗಳಿದ್ದು, ದ್ವಾರಗಳು ಸುಮಾರು ಇನ್ನೂರು ವರ್ಷಗಳಷ್ಟು ಹಿಂದಿನವು ಎರಡನೆ ಗರ್ಭಗೃಹದ ಮೂಲೆಗಳಲ್ಲಿ ಹಳೆಯ ದೇವಾಲಯದ ಸ್ತಂಭಗಳು ಕಂಡುಬರುತ್ತವೆ.

ಗರ್ಭಗೃಹದ ಬಲಭಾಗದಲ್ಲಿ ವೀರಭದ್ರನ ಮೂರ್ತಿ ಎಡಭಾಗದಲ್ಲಿ ಕುಳಿತಿರುವ ಜೈನಮುನಿ ಶಿಲ್ಪಕಂಡುಬರುತ್ತದೆ. ಈ ದೇವಾಲಯದ ಮುಂಭಾಗದಲ್ಲಿ ದೀಪಸ್ತಂಭವಿದ್ದು ಜೀರ್ಣೋದ್ಧಾರ ಕಾಲದಲ್ಲಿ ದೇವಾಲಯದ ಕಟ್ಟಡಕ್ಕೆ ಬಳಸಲಾಗಿದೆ.

ಈ ಊರಿನ ೧೫೫೯ ರ ಶಾಸನವು, ತೊರಗಲೆವೆಂಡಿಯು ಗುಮ್ಮಗೋಳದಲ್ಲಿ ನೀಡಿದ ದಾನವನ್ನು ಉಲ್ಲೇಖಿಸಿದೆ. ಗುಮ್ಮಗೋಳದ ಹೆಸರು ಬರಲು ನೀರಿಗಾಗಿ ಪರದಾಟ ಗೋಳಾಟಗಳ ನೆಲೆಯಲ್ಲಿ ಗುಮ್ಮಗೋಳ ಎಂದು ಹೆಸರು ಬಂದಿದೆ ಎಂಬ ಪ್ರತೀತಿ ಇದೆ.

೬೬. ಗ್ರಾಮ : ಪಡೇಸೂರು

ಹೆಸರು : ಬಸವಣ್ಣ

ಸ್ಥಳ : ಕೆರೆ ದಂಡೆಯಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪು ಶಿಲೆ

ಇತ್ತೀಚಿನ ದೇವಾಲಯವಿದು ಎರಡು ಗರ್ಭಗೃಹ ಮತ್ತು ಒಂದು ಸಭಾಮಂಟಪಗಳನ್ನು ಒಳಗೊಂಡಿದೆ. ಮೊದಲ ಗರ್ಭಗೃಹದಲ್ಲಿ ನಂದಿಶಿಲ್ಪವಿದ್ದು ಎರಡನೆಯ ಗರ್ಭಗೃಹದಲ್ಲಿ ಲಿಂಗವಿದೆ. ಈ ಶಿಲ್ಪಗಳು ಸಹ ಇತ್ತೀಚಿನವು. ಆದರೆ ಹೊರಭಾಗದಲ್ಲಿ ಭಗ್ನಗೊಂಡ ನಂದಿ ಮತ್ತು ನಾಗಶಿಲ್ಪಗಳಿವೆ. ಎದುರಿಗಿರುವ ಮರದ

ಕೆಳಗೆ ಮಹಿಷಮರ್ಧಿನಿಯ ಉಬ್ಬುಶಿಲ್ಪದ ಫಲಕವಿದೆ.ಇದೇ ಊರಿನ ಸಿದ್ಧಲಿಂಗೇಶ್ವರ ದೇವಾಲಯದ ಮುಂಭಾಗದಲ್ಲಿ ಪ್ರಾಚೀನ ಲಿಂಗವಿದೆ. ಲಿಂಗದಲ್ಲಿ ಬ್ರಹ್ಮನ ಭಾಗ ಕಂಡುಬರುತ್ತದೆ.

೬೪. ಗ್ರಾಮ : ಯಮನೂರು

ಹೆಸರು : ಈಶ್ವರ ಗುಡಿ

ಸ್ಥಳ : ಕೆರೆಹತ್ತಿರವಿದೆ.

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿರುವ ಲಿಂಗ ಹಳೆಯದು ಪ್ರಸ್ತುತ ಮೇಲೆ ಸಿಮೆಂಟ್ ಲೇಪನಮಾಡಲಾಗಿದೆ. ನಂದಿಶಿಲ್ಪ ಇತ್ತೀಚಿನದು, ಜಿಲ್ಲೆಯ ಬಹುತೇಕ ಹಳೆಯ ದೇವಾಲಯಗಳು ನಾಶಗೊಂಡಿದ್ದು ಬದಲಿಗೆ ಸ್ಥಳೀಯ ಶೈಲಿಯಲ್ಲಿ ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡ ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಕೆಲವೆಡೆ ಹಳೆಯಶಿಲ್ಪಗಳನ್ನು ಪೂಜಿಸುತ್ತಿದ್ದರೆ. ಮತ್ತೆ ಕೆಲವೆಡೆ ಹೊಸದಾಗಿ ಮಾಡಿದ ಶಿಲ್ಪಗಳನ್ನು ಪೂಜಿಸಲಾಗುತ್ತಿದೆ.

೬೫. ಗ್ರಾಮ : ಶ್ಯಾನವಾಡ

ಹೆಸರು : ಕಲ್ಮೇಶ್ವರ

ಸ್ಥಳ : ಊರ ಉತ್ತರ ಮೂಲೆಯಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಇದೊಂದು ಸಣ್ಣಗುಡಿ, ಮಾಳಿಗೆ ಕೊಠಡಿಯಲ್ಲಿಪ್ರಾಚೀನ ಲಿಂಗವಿದೆ. ಮೊದಲಿಗೆ ಪೂರ್ವಕ್ಕೆ ದ್ವಾರವಿದ್ದು ಅದನ್ನು ಮುಚ್ಚಿ ಪಶ್ಚಿಮಕ್ಕೆ ದ್ವಾರವನ್ನಿಡಲಾಗಿದೆ. ಕೊಠಡಿಯ ಮುಂಭಾಗದಲ್ಲಿ ಹಂಚಿನ ಪಡಸಾಲೆ ಇದೆ. ಲಿಂಗದ ಮುಂದಿರುವ ನಂದಿಶಿಲ್ಪ ಇತ್ತೀಚಿನದು. ಹೊರಭಾಗದಲ್ಲಿ ಆಂಜನೇಯ ನಾಗ ಮತ್ತಿತರ ಶಿಲ್ಪಾವಶೇಷಗಳಿವೆ.

೬೬. ಗ್ರಾಮ : ಕೊಂಡಿಕೊಪ್ಪ

ಹೆಸರು : ಕಲ್ಮೇಶ್ವರ

ಸ್ಥಳ : ಊರನಡುವೆಯಿದೆ

ಕಾಲ : ಆಧುನಿಕ

ದಿಕ್ಕು : ಉತ್ತರಾಭಿಮುಖ

ವಸ್ತು : ಕಲ್ಲು

ಹಳೆಯ ಮಣ್ಣಿನ ದೇವಾಲಯವನ್ನು ಕೆಡವಿ ಇತ್ತೀಚೆಗೆ ಆರ್.ಸಿ.ಸಿ. ಕಟ್ಟಡದ ದೇವಾಲಯವನ್ನು ನಿರ್ಮಿಸುತ್ತಿದ್ದಾರೆ. ಇಲ್ಲಿರುವ ಹಳೆಯ ಲಿಂಗವು ಯೋನಿಪೀಠ ಮತ್ತು ರಂಧ್ರಭಾಗವನ್ನು ಮಾತ್ರ ಹೊಂದಿದೆ. ನಂದಿ, ನಾಗಶಿಲ್ಪ ಮತ್ತಿತರ ಶಿಲ್ಪಾವಶೇಷಗಳಿವೆ. ಇದರಿಂದ ಇಲ್ಲಿ ಪ್ರಾಚೀನ ದೇವಾಲಯವಿತ್ತೆಂಬುದು ಸ್ಪಷ್ಟವಾಗುತ್ತದೆ.

೬೭. ಗ್ರಾಮ : ಮಂಜುನಾಥನಗರ (ನವಲಗುಂದ)

ಹೆಸರು : ಈಶ್ವರ

ಸ್ಥಳ : ಮಂಜುನಾಥ, ನಗರದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಮಣ್ಣು ಮತ್ತು ಕಲ್ಲುಗಳಿಂದ ದೇವಾಲಯ ನಿರ್ಮಿಸಲಾಗಿದೆ. ಕೊಠಡಿಯ ದೇವಾಲಯ ಒಳಗೆ ಪ್ರಾಚೀನ ಲಿಂಗವಿದೆ. ಹೊರಭಾಗದಲ್ಲಿ ಹಳೆಯ ದೇವಾಲಯ ವಾಸ್ತು ಅವಶೇಷಗಳು ಬಿದ್ದಿವೆ. ಕೊಠಡಿಯಲ್ಲಿರುವ ಲಿಂಗವು ಸ್ವಯಂಭೂ ರಚನೆಯದಾಗಿದೆ. ಹೊರಭಾಗದಲ್ಲಿರುವ ನಂದಿಶಿಲ್ಪ ಇತ್ತೀಚಿನದು.

೬೮. ಗ್ರಾಮ : ಮಂಜುನಾಥನಗರ (ನವಲಗುಂದ)

ಹೆಸರು : ಈಶ್ವರ

ಸ್ಥಳ : ಮಂಜುನಾಥ, ನಗರದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಮಾಳಿಗೆ ಕಟ್ಟಡವಾಗಿರುವ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ೧೧-೧೨ ನೇ ಶತಮಾನಕ್ಕೆ ಸೇರುವ ಲಿಂಗವಿದೆ. ಚೌಕರಚನೆಯದಾಗಿದ್ದು ಬ್ರಹ್ಮ ಭಾಗವು ನೆಲದೊಳಗಿದೆ. ಸಪ್ತಮಾತೃಕೆಯರ ಶಿಲ್ಪ ಫಲಕ ಗಣಪತಿ, ನಂದಿ ಮತ್ತಿತರ ಶಿಲ್ಪಾವಶೇಷಗಳು ಕಂಡುಬರುತ್ತವೆ. ಇವೆಲ್ಲವೂ ಇಲ್ಲಿ ಪ್ರಾಚೀನ ದೇವಾಲಯ ಇತ್ತೆಂಬುದನ್ನು ದೃಢಪಡಿಸುತ್ತವೆ.

**೪. ವೈಷ್ಣವ ದೇವಾಲಯಗಳು**

೧. ಗ್ರಾಮ : ನವಲಗುಂದ

ಹೆಸರು : ಗಣಪತಿ

ಸ್ಥಳ : ವಿನಾಯಕ ಪೇಟೆಯಲ್ಲಿದೆ

ಕಾಲ : ೧೧ ಮತ್ತು ೧೨ ಶತಮಾನ

ರಾಜವಂಶ/ಮಂಡಳಿಕ : ಕಲ್ಯಾಣ ಚಾಲುಕ್ಯ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ನಿರಿಸಂಗಿ ಸಂಸ್ಥಾನ ರಾಜನಾದ ಎರಡನೆಯ ಜಾಯಗೊಂಡ ಎಂಬುವನು ಈ ದೇವಾಲಯವನ್ನು ನಿರ್ಮಿಸಿದನೆಂದು ಪ್ರತೀತಿ ಇದೆ. ಗರ್ಭಗೃಹ, ಅಂತರಾಳ, ನವರಂಗ ಮತ್ತು ಸಭಾಮಂಟಪಗಳಿರುವ ದೇವಾಲಯವನ್ನು ಕಲ್ಯಾಣದ ಚಾಲುಕ್ಯರ ಶೈಲಿಯಲ್ಲಿ ನಿರ್ಮಿಸಲಾಗಿದೆ. ಲಲಾಟಬಿಂಬಗಳಲ್ಲಿ ಕಮಲ ಇದೆ. ನವರಂಗದಲ್ಲಿ ದುಂಡನೆಯ ಕಂಬಗಳಿವೆ. ಮಧ್ಯದಲ್ಲಿ ಎತ್ತರದ ಚೌಕ ವೇದಿಕೆಯಿದ್ದು ಭುವನೇಶ್ವರಿ ಇದೆ. ದುಂಡನೆಯ ನಾಲ್ಕು ಸ್ತಂಭಗಳು ಬಳೆಗಳ ಅಲಂಕರಣವನ್ನು ಹೊಂದಿವೆ. ದೇವಕೋಷ್ಟಗಳಿದ್ದು ಕಂಬ ಮತ್ತು ಶಿಖರಗಳಿಂದ ಅಲಂಕೃತಗೊಂಡಿವೆ. ಪ್ರವೇಶಿಸಲು ಉತ್ತರ, ದಕ್ಷಿಣ ಮತ್ತು ಪೂರ್ವದಿಕ್ಕುಗಳಲ್ಲಿ ದ್ವಾರಗಳೂಂಟು ಮುಂದೆ ಸಭಾಮಂಟ ಇದೆ. ಗರ್ಭಗೃಹದ ಮೇಲೆ ಸಣ್ಣಶಿಖರವಿದೆ. ಗರ್ಭಗೃಹದಲ್ಲಿ ಎತ್ತರದ ಪಾಣಿಪೀಠದ ಮೇಲೆ ಗಣಪತಿ ಶಿಲ್ಪವಿದೆ.

೨. ಗ್ರಾಮ : ನವುಲಗುಂದ

ಹೆಸರು : ಗೋವಿಂದರಾಜ

ಸ್ಥಳ : ಗುಡ್ಡದ ಕೇರಿ ಓಣಿಯಲ್ಲಿದೆ.

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಹಳೆಶೈಲಿಯಲ್ಲಿದ್ದು ಗರ್ಭಗೃಹ ಮತ್ತು ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ಅನಂತಶಯನ ಶಿಲ್ಪವಿದ್ದು ಗಾರೆಯ ಕಮಾನಿನ ಅಲಂಕರಣವನ್ನು ಕಾಣಬಹುದು. ಸಬಾಮಂಟಪದ ಮಧ್ಯದ ತೊಲೆಯಲ್ಲಿ ರಾಮ ಸೀತೆ ಆಂಜನೇಯ ಮತ್ತು ಸಪ್ತ ಋಷಿಗಳ ಉಬ್ಬುಶಿಲ್ಪಗಳಿವೆ. ಚೌಕ ಮತ್ತು ಅಷ್ಟಮುಖ ರಚನೆಯ ಕಂಬಗಳಿವೆ. ದೇವಾಲಯವನ್ನು ಮರುಳಗಲ್ಲಿನಲ್ಲಿ ನಿರ್ಮಿಸಿರುವುದು ಇಲ್ಲಿನ ವಿಶೇಷ ಮುಂಭಾಗದ ಚಾವಣಿ ಇಳಿಜಾರಾಗಿದ್ದು ಮೇಲೆ ಕೈಪಿಡಿ ಗೋಡೆಯನ್ನು ನಿರ್ಮಿಸಲಾಗಿದೆ ಇದರ ಮೇಲೆ ಹೂಜಿಯಾಕಾರದ ಅಲಂಕಾರಿಕ ಕೆತ್ತನೆಗಳಿವೆ.

೩. ಗ್ರಾಮ : ನವಲಗುಂದ

ಹೆಸರು : ವೀರಭದ್ರೇಶ್ವರ

ಸ್ಥಳ : ಹೀರೆಮಠದ ಓಣಿಯಲ್ಲಿದೆ

ಕಾಲ : ಕ್ರಿ.ಶ. ೧೭ ನೆ ಶತಮಾನ

ರಾಜವಂಶ/ಮಂಡಳಿಕ : ವಿಜಯನಗರೋತ್ತರ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯವು ಜೀರ್ಣೋದ್ಧಾರವಾಗಿವೆ. ಮರದ ಕೆತ್ತನೆಯಲ್ಲಿ ಗರ್ಭಗೃಹ ಮತ್ತು ಸಭಾಮಂಟಪಗಳು ಇವೆ. ಸಬಾಮಂಟಪದಲ್ಲಿ ಮರದ ಕಂಬಗಳನ್ನು ಅಳವಡಿಸಿದ್ದಾರೆ. ಸ್ತಂಭಗಳು ಚೌಕರಚನೆಯವು ಬೋದಿಗೆಯಲ್ಲಿ ತಲೆಕೆಳಗಾದ ಕಮಲದ ಮೊಗ್ಗಗಳನ್ನು ಬಿಡಿಸಿರುವುದರಿಂದ ಸೌಂದರ್ಯ ಇಮ್ಮಡಿಸಿದೆ. ಈ ಭಾಗದ ವಿಜಯನಗರೋತ್ತರ ಶೈಲಿಗೆ ಒಂದು ಉತ್ತಮ ಉದಾಹರಣೆ ಎನ್ನಬಹುದು.

ಗರ್ಭಗೃಹದಲ್ಲಿ ವೀರಭದ್ರ ದೇವರ ಶಿಲ್ಪವಿದೆ ಸಭಾಮಂಟಪದ ಗೋಡೆಗಳಲ್ಲಿ ನಾಗನಂದಿ ಮತ್ತಿತರ ಶಿಲ್ಪಗಳಿವೆ. ಈ ದೇವಾಲಯದ ಹಿಂಬದಿಯಲ್ಲಿರುವ ಹೀರೆಮಠದಲ್ಲಿ, ಸ್ತಂಭಗಳನ್ನು ಅಳವಡಿಸಲಾಗಿದೆ. ಸೂಕ್ಷ್ಮಕೆತ್ತನೆಗಳ ಅಲಂಕರಣವನ್ನು ಕಾಣಬಹುದು. ಬೋದಿಗೆ ಮತ್ತು ತೊಲೆಗಳಲ್ಲಿ ಸಹ ಅಲಂಕಾರಿಕ ಕೆತ್ತನೆಗಳಿವೆ.

೪. ಗ್ರಾಮ : ನವಲಗುಂದ

ಹೆಸರು : ವೆಂಕಟೇಶ್ವರ

ಸ್ಥಳ : ಗುಡ್ಡನಕೇರಿ ಓಣಿಯಲ್ಲಿದೆ

ಕಾಲ : ಕ್ರಿ.ಶ. ೧೭ ಮತ್ತು ೧೮ ಶತಮಾನ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಹಳೆಯದಾಗಿದ್ದು ಗರ್ಭಗೃಹ, ಸಭಾಮಂಟಪ ಮತ್ತು ಪ್ರವೇಶ ಮಂಟಪಗಳನ್ನು ಒಳಗೊಂಡಿದೆ ಸಭಾಮಂಟಪದಲ್ಲಿ ದುಂಡನೆಯ ಭಾರಿಗಾತ್ರದ ಸ್ತಂಭಗಳು ಕಂಡುಬರುತ್ತವೆ. ಸ್ತಂಭಗಳು ರಚನೆಯಲ್ಲಿ ಕಲ್ಯಾಣ ಚಾಲುಕ್ಯರ ತಿರುಗಣೆಯಂತ್ರದ ಕಂಬಗಳನ್ನೇ ಹೋಲುತ್ತವೆ. ಸಭಾಮಂಟಪದ ಚಾವಣಿಯಲ್ಲಿ ಹಾಗೂ ತೊಲೆಗಳಲ್ಲಿ ಕಮಲಗಳನ್ನು ಬಿಡಿಸಲಾಗಿದೆ. ಭಾರಿಗಾತ್ರದ ತೊಲೆ, ಸ್ತಂಭ ಮತ್ತು ಬೋದಿಗೆಗಳಿವೆ. ಸಭಾಮಂಟಪದ ವಿಶೇಷ ಇದರ ಗರ್ಭಗೃಹದ ಮೇಲೆ ನಾಲ್ಕು ಹಂತದ ಶಿಖರವಿದ್ದ ಕಳಸವನ್ನು ಹೊಂದಿದೆ. ಗರ್ಭಗೃಹದಲ್ಲಿ ವೆಂಕಟೇಶ್ವರ ಹಾಗೂ ಅಮೃತ ಶಿಲೆಯ ಉಗ್ರನರಸಿಂಹನ ಶಿಲ್ಪಗಳಿವೆ. ಅಧಿಷ್ಠಾನ ಭಾಗದಲ್ಲಿ ಆನೆ ಸಾಲುಗಳನ್ನು ಕಾಣಬಹುದು.

ದೇವರನ್ನು ಪೂಜಿಸುವ ವಂಶಸ್ಥರು ಅವರ ಅಭಿಪ್ರಾಯದ ಪ್ರಕಾರ ಸುಮಾರು ೧೭-೧೮ ನೆಯ ಶತಮಾನದಲ್ಲಿ ಬಂದು ನೆಲಗಿರುವ ಪಾಠಕ್ ವಂಶದವರು ಕನೌಜ್ ಬ್ರಾಹ್ಮಣರು ತಿರುಪತಿಗೆ ಹೋಗಲು ಅನಾನುಕೂಲವಾಗಿದ್ದರಿಂದ ಇಲ್ಲಿಯೇ ವೆಂಕಟೇಶ್ವರ ದೇವಾಲಯವನ್ನು ನಿರ್ಮಿಸಿದರೆಂದು ಪ್ರತೀತಿ ಇದೆ.

೫. ಗ್ರಾಮ : ನವಲಗುಂದ

ಹೆಸರು : ಸಿದ್ಧಲಿಂಗೇಶ್ವರ

ಸ್ಥಳ : ಬೆಣ್ಣೆಹಳ್ಳದ ಹತ್ತಿರವಿದೆ.

ಕಾಲ : ೧೭-೧೮ ಶತಮಾನ

ದಿಕ್ಕು : ಉತ್ತರಾಭಿಮುಖ

ವಸ್ತು : ಕಪ್ಪುಶಿಲೆ

ತೆರದ ಆವರಣದ ನಡುವೆ ಇರುವ ಕೊಠಡಿಯೇ ದೇವಾಲಯ. ಜೀರ್ಣೋದ್ಧಾರಗೊಂಡಿರುವ ಕೊಠಡಿಯಲ್ಲಿ ಪ್ರಾಚೀನ ಕಾಲಕ್ಕೆ ಸೇರಿದ ಲಿಂಗವಿದೆ. ಹೊರಗೋಡೆಯನ್ನು ಗಾರೆಯಿಂದ ಮುಚ್ಚಲಾಗಿದೆ. ಕೊಠಡಿಯ ಮೇಲೆ ಮೆಟ್ಟಿಲಿನಾಕಾರದ ಶಿಖರವಿದ್ದು ತುದಿಯಲ್ಲಿ ಸಣ್ಣಗುಮ್ಮಟದ ಆಲಂಕರಣ ಇದೆ. ಬಹುಶಃ ಹಳೆಯ ದೇವಾಲಯ ಬಿದ್ದು ಹೋದನಂತರ ಈಗಿರುವ ಕೊಠಡಿಯನ್ನು ನಿರ್ಮಿಸಿರಬೇಕು.

**೫. ಜೈನ ಬಸದಿಗಳು**

| | | | |
|---|---|---|---|
| ೧. | ಗ್ರಾಮ | : | ಅಣ್ಣಿಗೇರಿ |
| | ಹೆಸರು | : | ಪಾರ್ಶ್ವನಾಥ |
| | ಸ್ಥಳ | : | ಬಸ್ತಿ ಓಣಿಯಲ್ಲಿದೆ. |
| | ಕಾಲ | : | ಕ್ರಿ.ಶ. ೧೧-೧೨ ಶತಮಾನ |
| | ರಾಜವಂಶ/ಮಂಡಳಿಕ | : | ಕಲ್ಯಾಣ ಚಾಲುಕ್ಯ |
| | ದಿಕ್ಕು | : | ಪೂರ್ವಾಭಿಮುಖ |
| | ವಸ್ತು | : | ಕಪ್ಪುಶಿಲೆ |

ಬಸದಿಯು ಗರ್ಭಗೃಹ, ಅರ್ಧಮಂಟಪ ನವರಂಗ ಸಭಾಮಂಟಪ ಮತ್ತು ಪ್ರವೇಶ ಮಂಟಪಗಳನ್ನು ಒಳಗೊಂಡಿದೆ. ಅಧಿಷ್ಠಾನದ ಮೇಲಿರುವ ಹೊರಭಿತ್ತಿಯು ಜೀರ್ಣೋದ್ಧಾರವಾಗಿದೆ. ಜೀರ್ಣೋದ್ಧಾರದ ಸಂದರ್ಭದಲ್ಲಿ ನವರಂಗದ ಕಂಬಗಳನ್ನು ಸಿಮೆಂಟಿನಿಂದ ಮುಚ್ಚಲಾಗಿದೆ. ಸಭಾಮಂಟಪವು ಪೂರ್ವ, ದಕ್ಷಿಣ ಮತ್ತು ಉತ್ತರದಲ್ಲಿ ಪ್ರವೇಶ ದ್ವಾರಗಳನ್ನು ಹೊಂದಿದೆ. ಮೂರು ದ್ವಾರಗಳು ಪ್ರವೇಶ ಮಂಟಪಗಳನ್ನು ಹೊಂದಿದ್ದು ಮೇಲೇರಲು ಮತ್ತು ಇಕ್ಕೆಲಗಳಲ್ಲಿ ಕಟಾಂಜನಗಳನ್ನು ನಿರ್ಮಿಸಲಾಗಿದೆ. ಗರ್ಭಗೃಹದ ಮೇಲಿರುವ ಕದಂಬ, ನಾಗರ ಶಿಖರವು ಸ್ತೂಪಿ ಮತ್ತು ಕಳಸಗಳಿಂದ ಕೂಡಿದೆ. ಬಸದಿಯ ಮೇಲೆ ಗಾರೆಯಿಂದ ನಿರ್ಮಿಸಿದ ಒರಟು ರಚನೆಯ ಕೈಪಿಡಿ ಭಿತ್ತಿ ಇದೆ. ಮುಂಭಾಗದಲ್ಲಿ ಮಹಾದ್ವಾರವಿದೆ. ಗರ್ಭಗೃಹದಲ್ಲಿ ಪಾರ್ಶ್ವನಾರ್ಥಶಿಲ್ಪ ಪೂಜೆಗೊಳ್ಳುತ್ತಿದ್ದು, ಸುಮಾರು ೫ ಅಡಿ ಎತ್ತರವಿದೆ. ನವರಂಗದಲ್ಲಿ ಶಾಂಥಿನಾಥ, ಬ್ರಹ್ಮದೇವ, ಮಹಾವೀರ, ಸರಸ್ವತಿ, ಕುಷ್ಮಾಂಡಿನಿ ಪದ್ಮಾಪತಿ ಮತ್ತು ನಾಗಶಿಲ್ಪಗಳನ್ನು ಕಾಣಬಹುದು. ಆದಿನಾಥ ಮತ್ತು ಚತುರ್ವಿಂಶ ತೀರ್ಥಂಕರ ಅಮೃತ ಶಿಲೆಯ ಸಣ್ಮಶಿಲ್ಪಗಳಿವೆ. ಬಸದಿಯ ಮುಂದಿರುವ ಕ್ರಿ.ಶ. ೧೦೭೧ ರ ಎರಡನೆಯ ಸೋಮೇಶ್ವರನ ಶಾಸನವು ಅಣ್ಣಿಗೇರೆಯ ಬಸದಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೬೭ರ ಮತ್ತೊಂದು ಶಾಸನ ಸ್ತ್ರೀಯೊಬ್ಬಳ ಮರಣವನ್ನು ತಿಳಿಸುತ್ತದೆ.

**೬ ಶಾಕ್ತ ದೇವಾಲಯಗಳು**

| | | | |
|---|---|---|---|
| ೧. | ಗ್ರಾಮ | : | ನಾಗರಹಳ್ಳಿ |
| | ಹೆಸರು | : | ನೀಲಮ್ಮನ ಮಠ |
| | ಸ್ಥಳ | : | ಊರಪೂರ್ವ ಮೂಲೆಯಲ್ಲಿದೆ |

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಲ್ಲು, ಮಣ್ಣು, ಕಟ್ಟಿಗೆ

ಈ ದೇವಾಲಯ ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಉತ್ತಾರಭಿಮುಖವಾಗಿರುವ ಗರ್ಭಗೃಹದಲ್ಲಿ ಲಿಂಗವನ್ನು ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಎದುರಿಗೆ ನಂದಿ ಇದೆ. ಲಿಂಗ ಮತ್ತು ನಂದಿಯ ನಡುವೆ ದಕ್ಷಿಣದ ಗೋಡೆ ಹೊಂದಿಕೊಂಡಂತೆ ನೀಲಮ್ಮನ ಗದ್ಧಿಗೆಯನ್ನು ನಿರ್ಮಿಸಲಾಗಿದೆ. ಗರ್ಬಗೃಹದಲ್ಲಿರುವ ಲಿಂಗ ಪ್ರಾಚೀನವಾದುದು. ಆದರೆ ನಂದಿ ಇತ್ತೀಚಿನದಾಗಿವೆ. ಈ ಊರಿನ ಶಾಸನವೊಂದು ಕ್ರಿ.ಶ. ೧೨ ನೇ ಶತಮಾನಕ್ಕೆ ಸೇರಿದ್ದು ಶಾಂತಿನಾಥ ದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸುವುದು

೨. ಗ್ರಾಮ : ಭದ್ರಾಪುರ

ಹೆಸರು : ದ್ಯಾಮವ್ವ

ಸ್ಥಳ : ಊರಮಧ್ಯದಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಹೊಸಶೈಲಿಯಲ್ಲಿದ್ದು ಗರ್ಭಗೃಹದಲ್ಲಿ ಮರದಿಂದ ಮಾಡಿದ ದ್ಯಾಮವ್ವನನ್ನು ಕಾಣಬಹುದು. ಈ ದೇವಾಲಯದ ಎಡಭಾಗದಲ್ಲಿ ಗೋಡೆಗೆ ಅಂಟಿಕೊಂಡಿರುವಂತೆ ನೆಲದಲ್ಲಿ ಉದುಗಿರುವ ಶಾಸನ ಕಂಡುಬರುತ್ತದೆ.

ಅದೇ ಊರಿನ ಗ್ರಾಮ ಪಂಚಾಯ್ತಿಯ ಎಡಭಾಗದಲ್ಲಿ ಶಾಸನ ಇದೆ. ಹಾಗೂ ವಿಠ್ಠಲ ಮಠ ಎಂದು ಹೇಳಿಸಿಕೊಳ್ಳುವ ಪುರಾತನ ಮಠವೊಂದು ಇಲ್ಲಿ ಕಾಣಬಹುದು.

೩. ಗ್ರಾಮ : ಬಲ್ಲರವಾಡ

ಹೆಸರು : ಗಜಲಕ್ಷ್ಮಿ

ಸ್ಥಳ : ವಿನಾಯಕ ಪೇಟೆಯಲ್ಲಿದೆ

ಕಾಲ : ಆಧುನಿಕ

ದಿಕ್ಕು : ಪೂರ್ವಾಭಿಮುಖ

ವಸ್ತು : ಕಪ್ಪುಶಿಲೆ

ಈ ದೇವಾಲಯವು ಆಧುನಿಕವಾಗಿದೆ. ಗರ್ಭಗೃಹ ನವರಂಗ ಕಂಡುಬರುತ್ತದೆ. ದೇವಸ್ಥಾನದ ಬಲಭಾಗದಲ್ಲಿ ವೀರನೊಬ್ಬ ಕತ್ತಿ ಹಿಡಿದು ಹಾಗೂ ಗುರಾಣಿಗಳನ್ನು ಹಿಡಿದು ಯುದ್ಧಕ್ಕೆ ಹೋರಾಡುವಂತೆ ಕಾಣುತ್ತದೆ. ಇದೇ ಊರಿನ ಕೆರೆಯ ಮುಂಭಾಗದಲ್ಲಿ ಗಜಲಕ್ಷ್ಮಿ ಶಿಲ್ಪ ಇದೆ.

# ಅಧ್ಯಾಯ ಐದು

# ಮೂರ್ತಿಶಿಲ್ಪಗಳು

## ೧. ಪೀಠಿಕೆ

ಇತಿಹಾಸದ ಹಲವು ಅಂಶಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿರುವ ನವಲಗುಂದ ತಾಲೂಕು ಪ್ರಾಚೀನ ಕಾಲದಿಂದಲೂ ಅತ್ಯಂತ ಮಹತ್ವ ಪಡೆದ ಸ್ಥಳವಾಗಿದೆ. ಇತಿಹಾಸವನ್ನು ರಚಿಸುವ ಆಕರಗಳಲ್ಲಿ ದೇವಾಲಯಗಳ ಕಲೆ ಮತ್ತು ವಾಸ್ತು ಶಿಲ್ಪ ಅಂಶವು ಬಹಳ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ನಮ್ಮ ದೇಶದ ದೇವ ಮೂರ್ತಿಗಳಲ್ಲಿ ಎದ್ದು ಕಾಣುವುದು ಅಪ್ರಾಕೃತ ಮತ್ತು ಅಸ್ವಾಭಾವಿಕ ಸ್ವರೂಪ (ರಾಮಚಂದ್ರಮೂರ್ತಿ ಎನ್.ಕೆ., ೧೯೭೫ ಪುಟ. ೫೦) ಮೂರ್ತಿಶಿಲ್ಪದ ರೂಪ ಮೊದಲು ದೊರೆತದ್ದು ಹರಪ್ಪಾ ಮತ್ತು ಮಹೆಂಜೋದಾರೋ ನಾಗರೀಕತೆಯಲ್ಲಿ ದೇವತಾ ಪ್ರತಿಮೆಗಳನ್ನು ಮರ, ಶಿಲೆ, ರತ್ನ ಲೋಹ, ಮಣ್ಣು ಮೊದಲಾದವುಗಳಿಂದಾಗಲೀ ಅಥವಾ ಇವುಗಳ ಸಮ್ಮಿಶ್ರಣದಿಂದಾಗಲೀ ಮಾಡಬಹುದು. ಮಣ್ಣಿನಲ್ಲಿ ಮರದಲ್ಲಿ ಗೊಂಬೆಗಳನ್ನು ಮಾಡಿಕೊಂಡು ಮರದ ಬುಡದಲ್ಲಿ ಕಟ್ಟೆಯ ಮೇಲೆ ಕಲ್ಲು ಚಪ್ಪಡಿಯ ಮೇಲೆ ಚಪ್ಪಡಿಯನ್ನು ಗುಡಿಯಲ್ಲಿ ಇಟ್ಟು ತಮಗೆ ತೋರಿ ಬಂದ ರೀತಿಯಲ್ಲಿ ಪೂಜಿಸುತ್ತಿದ್ದರು. (ಸುಂದರ ಅ. ೧೯೬೮, ಪುಟ ೭೨) ಸೃಷ್ಠಿಕರ್ತ ಪರಮಾತ್ಮನಿಗೆ ಯಾವುದೇ ಒಂದು ನಿರ್ಧಿಷ್ಟ ಆಕಾರವಿಲ್ಲ. ಇದು ಪರಮಸತ್ಯ ಒಂದೊಂದು ದೇವರ ಮೂರ್ತಿಯು ಒಂದೊಂದು ಆಧ್ಯಾತ್ಮಿಕ ತತ್ವವನ್ನು ಒಳಗೊಂಡಿದೆ. ಸಮಾಜದಲ್ಲಿ ಬಳಕೆಯಲ್ಲಿರುವ ಅರ್ಥಪೂರ್ಣ ಸಂಕೇತ ಮುದ್ರೆ ಅಥವಾ ಮಾಧ್ಯಮದ ಮೂಲಕ ಸೂಚಿಸುತ್ತದೆ. ಇವರು ಲೋಹದಲ್ಲಿ ಮತ್ತು ಶಿಲೆಯಲ್ಲಿ ಮಾಡಿದ ಮೂರ್ತಿಗಳ ಉಲ್ಲೇಖ ಹಲವು ಶಾಸನಗಳಲ್ಲದೆ (ಚಿದಾನಂದ ಮೂರ್ತಿ ೧೯೭೭ ಪುಟ ೧೩) ವಾಸ್ತುಶಿಲ್ಪವನ್ನು ಹೇಳುವಾಗ ಮೂರ್ತಿಶಿಲ್ಪಕ್ಕೆ ಅನ್ವಯಿಸಿ ಹೇಳಬಹುದು. ಅಲ್ಲದೇ ವಾಸ್ತುಕೃತಿಗಳಿಗೊಪ್ಪುವಂತೆ, ಅವುಗಳಿಗನುಗುಣವಾಗಿ ಮೂರ್ತಿಶಿಲ್ಪರಚನೆ ಸಾಗಿತ್ತು. ಅಂದಿನ ಧಾರ್ಮಿಕ ಮತೀಯ ಹಿನ್ನೆಲೆಯಲ್ಲಿ ಇದುವರೆಗೆ ದೊರೆತ ಶಿವಲಿಂಗಗಳು, ವೈಷ್ಣವ ಮೂರ್ತಿಗಳು, ಸಂಕೇತಗಳು, ಜೈನ ಪ್ರತಿಮೆಗಳು.

ಮೂರ್ತಿಶಿಲ್ಪದಲ್ಲಿ ೩ ವಿಧಗಳು ೧. ಸ್ಥಾನಿಕ ೨. ಅಸೀನ, ೩. ಶಯನಮೂರ್ತಿ ಶಿಲ್ಪವನ್ನು ಇಂತಹುದೇ ಎಂದು ಗುರುತಿಸಲು ಇದಕ್ಕೆ ತನ್ನದೇ ಆದ ಪ್ರತಿಮಾ ಲಕ್ಷಣಗಳಿರುತ್ತವೆ. ಲಾಂಛನಗಳೂ ಇರುತ್ತವೆ. ಈ ಹಿನ್ನೆಲೆಯನ್ನು ಆಧಿರಿಸಿ ಪ್ರಸ್ತುತ ನವಲಗುಂದ ತಾಲೂಕಿನ ಮೂರ್ತಿಗಳ ಪ್ರತಿಮಾ ಲಕ್ಷಣದ ಪ್ರಸ್ತಾವನೆಯನ್ನು ಇಲ್ಲಿ ಮಾಡಲಾಗಿದೆ. ಬಹುತೇಕ ದೇವಾಲಯಗಳ ದೇವಕೋಷ್ಠಗಳಲ್ಲಿ ಶಿಲ್ಪಗಳಲ್ಲಿ ಕೆಲವು ಹೊಸ ದೇವಾಲಯಗಳಲ್ಲಿ ಹಳೆಯ ಶಿಲ್ಪಗಳನ್ನು ಪ್ರತಿಷ್ಠಾಪಿಸಿದ್ದಾರೆ. ಹೆಚ್ಚಿನ ಹೊಸ ದೇವಾಲಯಗಳಲ್ಲಿ ಹೊಸ

ಶಿಲ್ಪಗಳನ್ನು ಪ್ರತಿಷ್ಠಾಪಿಸಿ ಹಳೆಯ ಶಿಲ್ಪಗಳನ್ನು ಹೊರಹಾಕಿದ್ದಾರೆ. ಕೆಲವೊಮ್ಮೆ ಪ್ರಾಚೀನ ಶಿಲ್ಪಾವಶೇಷಗಳು ಗ್ರಾಮಸ್ಥರ ಇಚ್ಛೆಗೆ ಅನುಗುಣವಾಗಿ ಸ್ಥಳಾಂತರಗೊಂಡಿವೆ. ಇಂತಹ ಶಿಲ್ಪಾವಶೇಷಗಳ ಸಂಗ್ರಹ ಮತ್ತು ಸಂರಕ್ಷಣೆಯ ಕೆಲಸ ತುರ್ತಾಗಿ ಆಗಬೇಕಿದೆ. ಇಲ್ಲದಿದ್ದಲ್ಲಿ ಮನುಷ್ಯ ಮೌಢ್ಯಕ್ಕೆ ತುತ್ತಾಗಿ ಹಾಳಾಗುತ್ತಿವೆ. ಅಂತಹವನ್ನು ಜನರಲ್ಲಿ ಅರಿವು ಮೂಡಿಸಬೇಕು. (ಸಿ.ಮಹಾದೇವ ೨೦೦೬, ಪುಟ ೨೭)

**ವೈಷ್ಣವ ಮೂರ್ತಿಶಿಲ್ಪಗಳು**

ಯಜ್ಞಯಾಗಾದಿಗಳಿಗೆ ವರ್ಣಾಶ್ರಮಕ್ಕೆ ಪ್ರಾಧಾನ್ಯತೆ ಕೊಟ್ಟಿದ್ದ ವೈದಿಕ ಧರ್ಮ ಅಕ್ಕ ಪಕ್ಕದಲ್ಲಿ ಅದಕ್ಕೆ ಭಿನ್ನವಾದ ಧರ್ಮಭಾಗವತ ಧರ್ಮ. ಈ ಧರ್ಮದ ಸ್ಥಾಪಕಕ್ಷತ್ರಿಯನಾದ ಕೃಷ್ಣವಾಸುದೇವ ಕೃಷ್ಣ. ತನ್ನ ಆರಾಧ್ಯ ಧೈವವನ್ನು ಭಾಗವತ್ ಎಂದು ಹೇಳಲಾಗಿದೆ. ತನ್ನ ಅನುಯಾಯಿಗಳನ್ನು ಕೃಷ್ಣನಿಗೆ ದೈವ ಪಟ್ಟಕಟ್ಟಿ ಅವನು ಒಂದು ಅವತಾರವೆಂದು ಭಾವಿಸಿದರು. ಇದೆ. ವೈಷ್ಣವ ಧರ್ಮ (ಶಿವಲೀಲ ೨೦೦೭, ಪು. ೯೦ ಅಪ್ರಕಟಿತ ಕಿರುಪ್ರಬಂಧ)

ವೈಷ್ಣವ ಶಿಲ್ಪಗಳಲ್ಲಿ ಮುಖ್ಯವಾಗಿ ವಿಷ್ಣುಶಿಲ್ಪವನ್ನು ಕಾಣುತ್ತೇವೆ. ವೇದಗಳಲ್ಲಿಯೇ ವಿಷ್ಣುವಿನ ಉಲ್ಲೇಖ ಬರುತ್ತದೆ. ಅಲ್ಲಿ ಇತನ ಸ್ಥಾನ ಸಣ್ಣದು ಸವಿತೃ, ಪೂಷನ, ಸೂರ್ಯವಿಷ್ಣುಭಂಗಿ, ಆರ್ಯಮನ್ ಎಂಬ ಸೂರ್ಯನ ಅಂಶಗಳಲ್ಲಿ ವಿಷ್ಣುವು ಒಬ್ಬನು ವೇದದಲ್ಲಿ ಐದಾರು ಸೂಕ್ತಗಳಲ್ಲಿ ವಿಷ್ಣುವರ್ಣನೆ ಇದೆ. ಇವನು ಮೂರು ಹೆಜ್ಜೆಗಳಲ್ಲಿ ಪೃಥ್ವಿ ಅಂತರಿಕ್ಷ ಆಕಾಶಗಳನ್ನು ಕ್ರಮಿಸುವವನು. ಇವನಿಗೆ ಉರುಗಾಯಿ ಉರುಕ್ರಮ ಎಂಬ ಹೆಸರುಗಳು ಇವೆ. ಬ್ರಾಹ್ಮಣಗಳ ಕಾಲದಲ್ಲಿ ವಿಷ್ಣುವಿನ ಪ್ರಾಧಾನ್ಯವು ಹೆಚ್ಚುತ್ತಹೋಯಿತು. ದೇವತೆಗಳಲ್ಲೆಲ್ಲಿ ವಿಷ್ಣುವೇ ವರಿಷ್ಠ ದೇವತೆಯಾದ ಅಗ್ನಿಯೇ ಕನಿಷ್ಠ ದೇವತೆಯೊಂದು ಐತರೇಯ ಬ್ರಾಹ್ಮಣವು ಬಣ್ಣಿಸಿದೆ. ಇತಿಹಾಸ ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮ ದೇವತೆಯಾಗಿ ಪರಿಶ್ರಮಿಸಿದನು. ಕ್ರಿ.ಪೂ. ೨೦೦ ರ ಸುಮಾರಿಗೆ ಸೇರಬಹುದಾದ ರಜಪೂತಾನದಲ್ಲಿರುವ ಘೋಸುಂಡಿ ಎಂಬ ಸ್ಥಳದಲ್ಲಿ ದೊರೆತ ಶಿಲಾಲೇಖದಲ್ಲಿ ಸಂಕರ್ಷಣ ವಾಸುದೇವರ ಹೆಸರಿದೆ. (ದತ್ತಾತ್ರೇಯ ಜಿ. ಕುಲಕರ್ಣಿ ೨೦೦೬, ಪುಟ ೨೩೫ ಅಪ್ರಕಟಿತ ಪ್ರಬಂಧ)

ವಿಷ್ಣುವಿಗೆ ಹಲವಾರು ಹೆಸರುಗಳು ಇವೆ. ಕೇಶವ ನಾರಾಯಣ, ಮಾಧವ, ಗೋವಿಂದ, ವಿಷ್ಣು ಮಧುಸೂಧನ ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ ದಾಮೋದರ ವಾಸುದೇವ, ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ, ಪುರುಷೋತ್ತಮ ಅಧ್ಯೋಕ್ಷಜ ನರಸಿಂಹ ಜನಾರ್ಧನ, ಉಪೇಂದ್ರ, ಹರಿ ಮತ್ತು ಕೃಷ್ಣ ಪಂಚರಾತ್ರಾಗಮವು ಕೇಶವಾದಿ ಚತುರ್ವಿಂಶತಿ ಮೂರ್ತಿಗಳ ಹೆಸರಿನಷ್ಟು ವೈವಿಧ್ಯತೆ ಇದ್ದರೂ ಶಕ್ತಿ ಒಂದೇ

ವಿಷ್ಣುವನ್ನು ಚತುರ್ವಂಶಿ ಮೂರ್ತಿಗಳಿಂದಲೂ ಹಾಗೂ ಹತ್ತು ಅವತಾರಗಳಿಂದಲೂ ಪೂಜಿಸಲಾಗುತ್ತದೆ. ಪುರಾಣಗಳ ಪ್ರಕಾರ ವಿಷ್ಣುವಿನ ನಾಲ್ಕುಮೂರ್ತಿಗಳಾದ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಮತ್ತು ಅನಿರುದ್ಧ ಇವುಗಳಲ್ಲಿ ವಾಸುದೇವಮೂರ್ತಿಯೇ ಪ್ರಮುಖ ಉಳಿದವರಲ್ಲಿ ಸಂಕರ್ಷಣನು ವಾಸುದೇವನ ಅಣ್ಣನಾಗಿ ಪ್ರದ್ಯುಮ್ನನು ಮಗನಾಗಿ ಮತ್ತು ಅನಿರುದ್ಧನು ಮೊಮ್ಮಗನಾಗಿ ಕಂಡುಬರುತ್ತಾರೆ. ಈ ನಾಲ್ಕು ಮೂರ್ತಿಗಳ ಹೆಸರಿನಲ್ಲಿ ವ್ಯೂಹರಚನೆ ರೂಪಗೊಂಡಿದೆ. ಒಂದೊಂದು ವ್ಯೂಹದಲ್ಲಿಯೂ ಮೂರು ಮೂರ್ತಿಗಳನ್ನು ಕಾಣುತ್ತೇವೆ. ವಾಸುದೇವ ವ್ಯೂಹದಲ್ಲಿ ಮತ್ತು ಆರುಗುಣಗಳಿರುವ ಸಂಕರ್ಷಣವ್ಯೂಹದಲ್ಲಿ ಜ್ಞಾನ ಪ್ರಧಾನ

ಅನಿರುದ್ಧನಲ್ಲಿ ಐಶ್ವರ್ಯ ಪ್ರಧಾನ. ಹೀಗೆ ವ್ಯೂಹರಚನೆಗಳಿಂದ ಒಟ್ಟು ಇಪ್ಪತ್ತನಾಲ್ಕು ವಿಷ್ಣುವಿನ ಶಿಲ್ಪಗಳು ಗೋಚರಿಸುತ್ತವೆ. ನವಲಗುಂದ ತಾಲ್ಲೂಕಿನಲ್ಲಿರುವ ವೈಷ್ಣವ ಶಿಲ್ಪಗಳ ಪ್ರತಿಮಾ ಲಕ್ಷಣಗಳ ಈ ಕೆಳಗಿನಂತಿವೆ.

| | | | |
|---|---|---|---|
| ೧. | ಗ್ರಾಮ | : | ಅಣ್ಣಿಗೇರಿ |
| | ಶಿಲ್ಪ | : | ನಾಗಾರ್ಜುನ |
| | ಕಾಲಮಾನ | : | ಸು. ಕ್ರಿ.ಶ. ೧೨ ಶತಮಾನ |
| | ಸ್ಥಳ | : | ಊರಮಧ್ಯದಲ್ಲಿದೆ. |
| | ಅಳತೆ | : | ೭೫x೪೫ ಸೆಂ.ಮೀ. |
| | ಕೈಗಳು | : | ಎರಡು ಕೈಗಳು |
| | ಆಯುಧಗಳು | : | ಭಿನ್ನವಾಗಿವೆ. |
| | ಆಭರಗಳು | : | ಮಕರಕುಂಡಲ, ಹಾರ, ಸರ, ಕಡಗ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಅಮೃತೇಶ್ವರ ದೇವಾಲಯದ ಮಹಾಮಂಟದಲ್ಲಿ ನಾಗಾರ್ಜುನ ಶಿಲ್ಪವಿದೆ. ದ್ವಿಭುಜಾಧಾರಿಯಾದ ನಾಗಾರ್ಜುನ ರಾಜ ಲೀಲಾಸನದಲ್ಲಿ ಪೀಠದ ಮೇಲೆ ಕುಳಿತಿರುವನು. ದುರಾದೃಷ್ಟವಶಾತ್ ಈತನ ಎರಡು ಕೈಗಳು ಭಗ್ನಗೊಂಡಿರುವವು. ತಲೆಯಕೂದಲು ಗುಂಗುರ, ಗುಂಗುರವಾಗಿ ಕಿರೀಟದ ರೀತಿಯಲ್ಲಿ ಕಾಣುವುದು. ಈತನ ತಲೆಯ ಮೇಲ್ಭಾಗದಲ್ಲಿ ಐದು ಹೆಡೆಸರ್ಪವು ತನ್ನ ಹೆಡೆಯನ್ನು ಅರಳಿಸಿ ನಿಂತಿದೆ. ಈ ರೀತಿಯ ಶಿಲ್ಪ ಅಪರೂಪದ್ದಾಗಿದೆ. (ರು.ಮ.ಷಡಕ್ಷರಯ್ಯ, ೨೦೦೭, ಪುಟ ೮೨ ಜಯಮ್ಮ)

| | | | |
|---|---|---|---|
| ೨. | ಗ್ರಾಮ | : | ಅರೆಕುರಟ್ಟಿ |
| | ಶಿಲ್ಪ | : | ಹನುಮಂತ |
| | ಕಾಲಮಾನ | : | ಸು. ೧೨, ೧೩ ನೇ ಶತಮಾನ |
| | ಸ್ಥಳ | : | ಊರಮಧ್ಯದಲ್ಲಿದೆ. |
| | ಅಳತೆ | : | ೮೮x೫೨ ಸೆಂ.ಮೀ |
| | ಕೈಗಳು | : | ಎರಡು |
| | ಆಯುಧಗಳು | : | ಪರ್ವತ, ಗದೆ, ಮುದ್ಗರ |
| | ಆಭರಗಳು | : | ತೋಳುಬಂದಿ, ಕೈಕಡಗ, ಮುತ್ತಿನಹಾರ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಹನುಮಂತ ದೇವರ ಶಿಲ್ಪವು ಅರ್ಧ ಭೂಮಿಯೊಳಗೆ ಹೂತುದಿದೆ. ಬಲಗೈಯ ಮೇಲಕ್ಕೆ ಎತ್ತಿದೆ. ಎಡಗೈಯನ್ನು ಸೊಂಟದ ಮೇಲೆ ಇಟ್ಟಿದ್ದಾನೆ. ಇದು ಅರ್ಧ ಕಳಗೆ ಇರುವುದರಿಂದ ವಿಷಯ ಅಸ್ಪಷ್ಟವಾದಂತೆ ಕಾಣುತ್ತದೆ. ಆಗಮಗಳಲ್ಲಿ ಹನುಮಂತನನ್ನು ಆಂಜನೇಯನ ಮಗನೆಂದೂ, ರುದ್ರಾಂಶಸಂಭೂತನೆಂದೂ ಬಾವಿರುದ್ರನೆಂದೂ ಸೂರ್ಯಪುತ್ರನೆಂದೂ, ವಾಯುಪುತ್ರನೆಂದೂ ಮರುದ್ಗಣಗಳಿಗೆ ಸಂಬಂಧಿಸಿದವನೆಂದೂ,

ರಾಮಭಕ್ತನೆಂದೂ, ಭಾರತೀ ರಮಣನೆಂದೂ, ಮುಖ್ಯ ಪ್ರಾಣನೆಂದು ಕರೆಯಲಾಗಿದೆ. ದ್ವೈತಸಿದ್ಧಾಂತದ ಪ್ರವರ್ತಕನಾದ ಮಾಧ್ವಾಚಾರ್ಯರು ಹನುಮಂತ ಅವತಾರವೆಂದು ಹೇಳಲಾಗುತ್ತದೆ. (ನಂಜುಂಡಪ್ಪ ವೈ.ಡಿ. ಶಿವಯೋಗಿ ಶ್ರೀ ಜೇನುಕಲ್ಲು ಸಿದ್ದೇಶ್ವರ ೧೯೯೯, ಪುಟ ೨೦)

| | | | |
|---|---|---|---|
| ೩. | ಗ್ರಾಮ | : | ತಲೆಮಾರಬ |
| | ಶಿಲ್ಪ | : | ಆಂಜನೇಯ ಮೂರ್ತಿ |
| | ಕಾಲಮಾನ | : | ಸು. ೧೨, ೧೩ ನೇ ಶತಮಾನ |
| | ಸ್ಥಳ | : | ಊರಮಧ್ಯದಲ್ಲಿದೆ. |
| | ಅಳತೆ | : | ೫೫x೩೨ ಸೆಂ.ಮೀ. |
| | ಕೈಗಳು | : | ಎರಡು ಕೈ |
| | ಆಯುಧಗಳು | : | ಪರ್ವತ, ಗದೆ, ಶಂಕ |
| | ಆಭರಗಳು | : | ಕಾಲ್ಗಡಗ, ತೋಳುಬಂಧಿ, ಹಾರ, ಕೈಬಳೆ ಮಣಿಸರ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಈ ಶಿಲ್ಪ ಐದು ಮುಖವನ್ನು ಹೊಂದಿದ್ದು ಮುಂದಿನ ಮುಖವು ಉಗ್ರನರಸಿಂಹ, ಮುಂಭಾಗದ ಮುಖವು ಗರುಡನ ಮುಖವಾಗಿ ಬಲಭಾಗದ ಮುಖವು, ಹನುಮಂತದೇವರ ಮುಖವಾಗಿದ್ದು ನಡುಭಾಗದಲ್ಲಿ ಕುದುರೆಯ ಮುಖವಿದೆ. ಮೇಲುನೋಟಕ್ಕೆ ಆಂಜನೇಯ ಮೂರ್ತಿಯಂತೆ ಇದ್ದು ಬಲಗೈಯು ಅಭಯ ಮುದ್ರೆಯನ್ನು ಹೊಂದಿರುತ್ತದೆ. ಸಾಮಾನ್ಯವಾಗಿ ಆಂಜನೇಯನ ವಿಗ್ರಹದಲ್ಲಿ ಇರುವಂತೆ ಹನುಮಂತನ ಬಾಲವು ಅರ್ಧಚಂದ್ರಾಕೃತಿಯಲ್ಲಿ ಇದ್ದು ಸುರುಳಿಯಾಕಾರದಲ್ಲಿದೆ. ಇದಕ್ಕೆ ಒಂದು ಚಿಕ್ಕ ಗಂಟೆಯನ್ನು ಕಟ್ಟಲಾಗಿದೆ.

| | | | |
|---|---|---|---|
| ೪. | ಗ್ರಾಮ | : | ಗುಡಿಸಾಗರ |
| | ಶಿಲ್ಪ | : | ವಿಷ್ಣು |
| | ಕಾಲಮಾನ | : | ಸು. ೧೨-೧೩ ನೇ ಶತಮಾನ |
| | ಸ್ಥಳ | : | ಊರಮಧ್ಯದಲ್ಲಿದೆ. |
| | ಅಳತೆ | : | ೬೫x೩೯ ಸೆಂ.ಮೀ. |
| | ಕೈಗಳು | : | ಎರಡು |
| | ಆಯುಧಗಳು | : | ಶಂಕ, ಚಕ್ರವಿಧ, ಗದ |
| | ಆಭರಗಳು | : | ಮಣಿಸರ, ಕಾಲ್ಗಡಗ, ಕೈಬಳೆ ಕರ್ಣಕುಂಡ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ವಿಷ್ಣುವಿನ ಶಿಲ್ಪವು ಸ್ವಲ್ಪ ದೊಡ್ಡ ಗಾತ್ರವಾಗಿದ್ದು ಅಕ್ಕಪಕ್ಕದಲ್ಲಿ ಭೂದೇವಿ ಮತ್ತು ಶ್ರೀದೇವಿಯರ ಶಿಲ್ಪಗಳಿವೆ. ವಿಷ್ಣುವಿನ ಹಿಂದಿನ ಪ್ರಭಾವಳಿಯಲ್ಲಿ ಸುಂದರ ಕೆತ್ತನೆ. ವಿಷ್ಣುವಿನ ವಿಗ್ರಹದ ಪಕ್ಕದಲ್ಲಿ ಎರಡು ನಾಗದೇವರ ಶಿಲ್ಪ ಮತ್ತು ಗಣಪತಿಯ ಮೂರ್ತಿ ಇದೆ.

೫. ಗ್ರಾಮ : ಅರೆಕುರಟ್ಟಿ

ಶಿಲ್ಪ : ಕೃಷ್ಣ

ಕಾಲಮಾನ : ಸು. ೧೨-೧೩ ನೇ ಶತಮಾನ

ಸ್ಥಳ : ಊರಮಧ್ಯದಲ್ಲಿದೆ.

ಅಳತೆ : ೭೨x೪೮ ಸೆಂ.ಮೀ.

ಕೈಗಳು : ನಾಲ್ಕು

ಆಯುಧಗಳು : ಶಂಕ, ಚಕ್ರ ಕೊಳಲು

ಆಭರಗಳು : ಹಾರ, ಕೀರಿಟ, ಕಾಲ್ಗಡಗ, ಕೈಬಳೆ

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ಈ ಮೂರ್ತಿ ಮೇಲುನೋಟಕ್ಕೆ ಕೃಷ್ಣನ ಮೂರ್ತಿಯಂತೆ ಇದೆ. ಕೊಳಲನ್ನು ಹಿಡಿದುಕೊಂಡಿರುವುದರಿಂದ ವಿಷ್ಣುವಿನ ಅಕ್ಕಪಕ್ಕದಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಚಿಕ್ಕ ಮೂರ್ತಿಗಳು ಇವೆ. ಸಣ್ಣ ಶಿಲ್ಪಗಳನ್ನು ರುಕ್ಮಿಣಿ ಸತ್ಯಭಾಮ ಎಂದು ಊಹಿಸಲಾಗಿದೆ. ಶಿಲ್ಪಮೂರ್ತಿಯ ಪಾದದ ಅಕ್ಕ ಪಕ್ಕದಲ್ಲಿ ಹಸು ಕಾಣಬಹುದು.

೬. ಗ್ರಾಮ : ಅಹೆಟ್ಟಿ

ಶಿಲ್ಪ : ವಿಷ್ಣು

ಕಾಲಮಾನ : ಸು. ೧೨, ೧೩ ನೇ ಶತಮಾನ

ಸ್ಥಳ : ಊರಮಧ್ಯದಲ್ಲಿದೆ.

ಅಳತೆ : ೭೨x೫೧ ಸೆಂ.ಮೀ.

ಕೈಗಳು : ನಾಲ್ಕು

ಆಯುಧಗಳು : ಶಂಕ, ಚಕ್ರ, ಪದ್ಮ, ಗದೆ

ಆಭರಗಳು : ಕಂಠಿಹಾರ, ಕೀರಿಟ, ಕರ್ಣಕುಂಡಲ

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ವಿಷ್ಣುವಿನ ಈ ಶಿಲ್ಪವು ದೇವಸ್ಥಾನ ಹೊರ ಭಾಗದಲ್ಲಿ ಮಣ್ಣಿನಲ್ಲಿ ಅರ್ಧ ಹೂತು ಹೋಗಿದ್ದು, ಎರಡು ಕೈಗಳನ್ನು ತುಂಡರಿಸಲ್ಪಟ್ಟಿದೆ. ಮೂರ್ತಿಯ ಎಡಭಾಗದಲ್ಲಿ ದೇವತೆಗಳ ಸಣ್ಣಕೆತ್ತನೆಯಿದೆ ಮೂರ್ತಿಶಿಲ್ಪ ಭಗ್ನ ಸ್ಥಿತಿಯಲ್ಲಿದೆ. ವಿಷ್ಣುವಿನ ಪ್ರಭಾವಳಿ ಸುತ್ತಲೂ ದಶವತಾರಗಳ ಸುಂದರ ಕೆತ್ತನೆಯಿದೆ.

೭. ಗ್ರಾಮ : ನವಲಗುಂದ

ಶಿಲ್ಪ : ರಾಮ

ಕಾಲಮಾನ : ಸು. ೧೨-೧೩ ನೇ ಶತಮಾನ

ಸ್ಥಳ : ಊರಮಧ್ಯದಲ್ಲಿದೆ.

ಅಳತೆ : ೬೨x೩೩ ಸೆಂ.ಮೀ.

| | | |
|---|---|---|
| ಕೈಗಳು | : | ಎರಡು |
| ಆಯುಧಗಳು | : | ಗಧೆ, ಅಭಯ ಮುದ್ರೆಗಳು |
| ಆಭರಗಳು | : | ಹಾರ, ಕೀರಿಟ, ಸೊಂಟದ ಪಟ್ಟಿ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಅತ್ಯುತ್ತಮ |

ದ್ವಾರದ ಮೇಲುಭಾಗದಲ್ಲಿ ಶಿಲ್ಪ ಕಂಡುಬರುತ್ತದೆ. ಶಿಲ್ಪದ ಮಧ್ಯಭಾಗದಲ್ಲಿ ರಾಮನ ವಿಗ್ರಹವಿದ್ದು ಎಡಭಾಗದಲ್ಲಿ ಸೀತೆಯ ಮೂರ್ತಿ ಮತ್ತು ಬಲಭಾಗದಲ್ಲಿ ನಮಸ್ಕರಿಸುತ್ತಿರು ಆಂಜನೇಯ ಮೂರ್ತಿ ಇದೆ.

| | | | |
|---|---|---|---|
| ೮. | ಗ್ರಾಮ | : | ಅಣ್ಣಿಗೇರಿ |
| | ಶಿಲ್ಪ | : | ಚತುರ್‌ಮುಖ ಬ್ರಹ್ಮ |
| | ಕಾಲಮಾನ | : | ಸು. ೧೨ ನೇ ಶತಮಾನ |
| | ಸ್ಥಳ | : | ಪುರದ ಮಠದೇವಸ್ಥಾನ ಬಲಗಡೆ (ಅಂಬಿಕೊಂಡಿ ಬಿತ್ತಿಶಿಲ್ಪ) |
| | ಅಳತೆ | : | ೪೯x೨೮ ಸೆಂ.ಮೀ. |
| | ಕೈಗಳು | : | ಎಂಟು ಕೈ |
| | ಆಯುಧಗಳು | : | ಗದೆ, ಶಂಕ, ಚಕ್ರ |
| | ಆಭರಗಳು | : | ಕಂಠಿಹಾರ, ಕಾಲ್ಗಡಗ, ಕೈಬಳೆ, ಕಮಂಡಲು |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಈ ಶಿಲ್ಪವು ವಿಶೇಷವಾದ ರಚನೆಯಾಗಿದ್ದು ಮೇಲುನೋಟಕ್ಕೆ ಬ್ರಹ್ಮನಂತೆ ಕಂಡುಬಂದರೂ ವಿಷ್ಣುವಿನ ಲಕ್ಷಣಗಳು ಸ್ಪಷ್ಟವಾಗಿ ಕಂಡುಬುರತ್ತವೆ. ಈ ಶಿಲ್ಪವು ಗೋಡೆಗೆ ಅಂಟಿಕೊಂಡಿರುವ ಸ್ಥಿತಿಯಲ್ಲಿದ್ದು ನಾಲ್ಕು ಮುಖಗಳು ಅಭಿಮುಖವಾಗಿದೆ.

**ಶೈವಮೂರ್ತಿಶಿಲ್ಪಗಳು**

ಪ್ರಸ್ತುತ ಅಧ್ಯಾಯದ ಶೈವ ಶಿಲ್ಪಗಳಲ್ಲಿ ಪ್ರಮುಖವಾಗಿ ಲಿಂಗ, ಭೈರವ, ವೀರಭದ್ರ ಗಣಪತಿ, ಮಹೇಶ್ವರ ಪಾರ್ವತಿ, ನಂದಿಶಿಲ್ಪ ಕಾಣುತ್ತೇವೆ. ಈ ತಾಲೂಕಿನಲ್ಲಿ ಹೆಚ್ಚಿಗೆ ಶೈವಧರ್ಮಕ್ಕೆ ಅನ್ವಯಿಸುವ ಮೂರ್ತಿ ಶಿಲ್ಪಗಳು ಹೆಚ್ಚುಕಂಡುಬರುತ್ತವೆ.

| | | | |
|---|---|---|---|
| ೧. | ಗ್ರಾಮ | : | ತಿರ್ಲಾಪುರ |
| | ಶಿಲ್ಪ | : | ವೀರಭದ್ರ |
| | ಕಾಲಮಾನ | : | ಸು. ೧೨ ನೇ ಶತಮಾನ |
| | ಸ್ಥಳ | : | ಊರಮಧ್ಯೆ |
| | ಅಳತೆ | : | ೬೯x೫೧ ಸೆಂ.ಮೀ. |
| | ಕೈಗಳು | : | ನಾಲ್ಕು ಕೈಗಳು |

| | | |
|---|---|---|
| ಆಯುಧಗಳು | : | ಕತ್ತಿ, ಬಾಣ, ಗುರಾಣಿ |
| ಆಭರಗಳು | : | ಕಾಲ್ಲಡಗ, ಮಣಿಸರ, ತೋಳಬಂದಿ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ವೀರಭದ್ರ ವಿಗ್ರಹವನ್ನು ಸಿಂಹಗಳುಳ್ಳ ಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಚತುರ್ಭುಜಧಾರಿಯಾದ ವೀರಭದ್ರನು ಕೈಗಳಲ್ಲಿ ಕತ್ತಿ ಬಾಣ ಗುರಾಣಿಗಳನ್ನು ಹಿಡಿದಿರುವನು. ವಿವಿಧ ವಸ್ತ್ರಾಭರಣಗಳನ್ನು ಧರಿಸಿರುವನು. (ರು.ಮ.ಷಡಕ್ಷರಯ್ಯ ಮತ್ತು ಜಯಮ್ಮ ೨೦೦೭, ಪುಟ ೭೨)

| | | | |
|---|---|---|---|
| ೨. | ಗ್ರಾಮ | : | ತುಪ್ಪದಕುರಹಟ್ಟಿ |
| | ಶಿಲ್ಪ | : | ಭೈರವ |
| | ಕಾಲಮಾನ | : | ಸು. ೧೦ ನೇ ಶತಮಾನ |
| | ಸ್ಥಳ | : | ಊರಮಧ್ಯದಲ್ಲಿ |
| | ಅಳತೆ | : | ೭೨x೫೨ ಸೆಂ.ಮೀ. |
| | ಕೈಗಳು | : | ನಾಲ್ಕು |
| | ಆಯುಧಗಳು | : | ಕತ್ತಿ |
| | ಆಭರಣಗಳು | : | ಡಮರು, ತ್ರಿಶೂಲ, ಕಪಾಲಗಳಿವೆ. ರುಂಡಮಾಲೆ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಭೈರವ ಶಿಲ್ಪ ಕೆಲವು ವಿಶಿಷ್ಟ ಲಕ್ಷಣಗಳನ್ನು ಒಳಗೊಂಡಿದೆ. ಈತನು ಇಲ್ಲಿ ಸುಖಾಸನದಲ್ಲಿ ನಗ್ನನಾಗಿ ಕುಳಿತಿರುವನು. ಚತುರ್ಭುಧಾರಿಯಾದ ಈತನ ಕೈಯಿಗಳಲ್ಲಿ ಕತ್ತಿ ಡಮರು, ತ್ರಿಶೂಲ ಮತ್ತು ಕಪಾಲಗಳಿವೆ. ರುಂಡಮಾಲೆ ಧರಿಸಿರುವನು ಪೀಠದಲ್ಲಿರುವ ಶವದ ಚಿತ್ರದ ಮುಂದೆ ನಾಯಿಯಿದೆ. ಭೈರವನು ಧರಿಸಿದ ಕೇಶಾಲಂಕಾರ ಮತ್ತು ಸರ್ಪಾಭರಣಗಳು ಕಲಾತ್ಮಕವಾಗಿವೆ. (ರು.ಮ. ಷಡಕ್ಷರಯ್ಯ ಮತ್ತು ಡಾ.ಜಯಮ್ಮ, ೨೦೦೭, ಪು. ೭೨)

| | | | |
|---|---|---|---|
| ೩. | ಗ್ರಾಮ | : | ತಿರ್ಲಾಪುರ |
| | ಶಿಲ್ಪ | : | ಶಿವಲಿಂಗ |
| | ಕಾಲಮಾನ | : | ಸು. ೧೨-೧೩ ನೇ ಶತಮಾನ |
| | ಸ್ಥಳ | : | ಪುರದ ಮಠದೇವಸ್ಥಾನ ಬಲಗಡೆ ಅಂಬಿಕೊಂಡಿ ಬಿತ್ತಿಶಿಲ್ಪ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಕಪ್ಪುಶಿಲೆಯಲ್ಲಿ ನಿರ್ಮಿಸಿದ ವೃತ್ತಾಕಾರದ ಪೀಠದಲ್ಲಿ ಶಿವಲಿಂಗವಿದ್ದು ಅದರ ಮೇಲು ಭಾಗದಲ್ಲಿ ತಾಮ್ರದ ಜಲಪಾತ್ರೆ ಇದ್ದು ನಿರಂತರವಾಗಿ ಶಿವಲಿಂಗಕ್ಕೆ ನೀರನ್ನು ಸುರಿಯುತ್ತಿರುವ ದೃಶ್ಯವಿದೆ. ಶಿವಲಿಂಗದ ಜಲಧಾರೆಯು ಎಡಕ್ಕೆ ಇದೆ. ಶಿವಲಿಂಗ ಪೀಠದ ತಳಭಾಗವು ಕೂಡ ವೃತ್ತಾಕಾರವಾಗಿದೆ. ದೇವಾಲಯ ಗರ್ಭಗುಡಿಯ

ಒಳಭಾಗದಲ್ಲಿ ಶಿವಲಿಂಗವಿದ್ದು ಆ ಭಾಗದಲ್ಲಿಯೇ ನಂದಿಯ ಮೂರ್ತಿಇರುವುದು ಇದು ಗಂಟೆಯನ್ನು ಕಟ್ಟಿರುವುದು ಕಂಡುಬರುತ್ತದೆ. ಗರ್ಭಗುಡಿಯಲ್ಲಿ ಆಧುನಿಕ ಮಾರ್‌ಬಲ್ ಹಾಕಿರುವುದು ಕಂಡುಬರುತ್ತದೆ.

೪. ಗ್ರಾಮ : ಅಣ್ಣಿಗೇರಿ
ಶಿಲ್ಪ : ನಂದಿ ಶಿಲ್ಪ
ಕಾಲಮಾನ : ಸು. ೧೨-೧೩ ನೇ ಶತಮಾನ
ಸ್ಥಳ : ಹಳೇ ಅಮೃತೇಶ್ವರ
ಮಾಧ್ಯಮ : ಕಪ್ಪುಶಿಲೆ
ಸ್ಥಿತಿ : ಉತ್ತಮ

ವೃತ್ತಾಕಾರದ ಕಲ್ಲಿನ ಕಂಬದ ಮೇಲೆ ನಂದಿಯ ಶಿಲ್ಪವಿದೆ. ಇದು ಹಳೇ ಅಮೃತೇಶ್ವರ ದೇವಾಲಯದ ಮುಂಭಾಗದಲ್ಲಿದೆ. ಹೆಚ್ಚಾಗಿ ಶಿವನ ಮುಂಭಾಗದಲ್ಲಿ ನಂದಿಯಶಿಲ್ಪ ಕಂಡುಬರುತ್ತದೆ. ಆದರೆ ಇಲ್ಲಿ ಕಲ್ಲಿನಕಂಬ ಮೇಲೆ ಇರುವುದು ವಿಶೇಷವಾಗಿದೆ. ನಂದಿಶಿಲ್ಪವಿರುವ ಕಂಬವು ದುಂಡಾಗಿ ತಿರುಗಣೆಯಿಂದ ಕಡೆದಿದ್ದು ಕಂಬದ ಕೆಳಭಾಗ ಮಾಸಿಹೋದ ಶಾಸನ ಕಂಡುಬರುತ್ತದೆ. ಶಾಸನದ ಮೇಲು ಭಾಗದಲ್ಲಿ ಚಂದ್ರಸೂರ್ಯರ ಕೆತ್ತನೆ ಇದ್ದು ಅದರ ಕೆಳಭಾಗದಲ್ಲಿ ಶಿವಲಿಂಗವಿದೆ. ಈ ಶಿವಲಿಂಗದ ಅಕ್ಕಪಕ್ಕದಲ್ಲಿ ನಂದಿ ಚಿಕ್ಕಮೂರ್ತಿಗಳು ಕಂಡುಬರುತ್ತವೆ.

೫. ಗ್ರಾಮ : ನವಲುಗುಂದ
ಶಿಲ್ಪ : ಶಿವಲಿಂಗ
ಕಾಲಮಾನ : ಸು. ೧೨, ೧೩ ನೇ ಶತಮಾನ
ಸ್ಥಳ : ಮಂಜುನಾಥನಗರ
ಮಾಧ್ಯಮ : ಕಪ್ಪುಶಿಲೆ
ಸ್ಥಿತಿ : ಉತ್ತಮ

ನವಿಲೇಶ್ವರ ದೇವಾಲಯದ ಗರ್ಭಗುಡಿಯಲ್ಲಿರುವ ಶಿವಲಿಂಗವು ಚೌಕಕಾರದ ಪೀಠದಲ್ಲಿ ಇದೆ. ಶಿವಲಿಂಗದ ಜಲಧಾರೆಯು ಎಡಪಾರ್ಶ್ವದಲ್ಲಿದ್ದು ಲಿಂಗದ ಮುಂಭಾಗದಲ್ಲಿ ನಂದಿಯ ವಿಗ್ರಹವಿದೆ. ಶಿವಲಿಂಗದ ಹಿಂಭಾಗದ ಗೋಡೆಯಲ್ಲಿ ಸಪ್ತಮಾತೃಕೆಯರ ಕೆತ್ತನೆಯಿದೆ. ಅದರ ಬಲಭಾಗದಲ್ಲಿ ಗಣಪತಿಯ ವಿಗ್ರಹವು ಹಾಗೂ ಎಡಭಾಗದಲ್ಲಿ ಷಣ್ಮುಖನ ವಿಗ್ರಹವಿದೆ. ಗರ್ಭಗೃಹವು ಆಧುನಿಕ ಶೈಲಿಯಲ್ಲಿ ಕಂಡುಬರುತ್ತವೆ.

೬. ಗ್ರಾಮ : ತುಪ್ಪದ ಕುರಹಟ್ಟಿ
ಶಿಲ್ಪ : ಕಂಚಿನ ಚತುರ್ಮುಖ ಶಿವ
ಕಾಲಮಾನ : ೯ ನೇ ಶತಮಾನ
ಸ್ಥಳ : ಊರಮಧ್ಯದಲ್ಲಿ
ಅಳತೆ : ೬೯x೫೧ ಸೆಂ.ಮೀ.
ಕೈಗಳು : ಒಂದು

| | | |
|---|---|---|
| ಆಭರಗಳು | : | ಜಟಾಮುಕುಟ, ವಿಭಿನ್ನ ಸರಗಳು ಕುಂಡಲಗಳು, ಉದರಪಟ್ಟಿ, ಸೊಂಟಪಟ್ಟಿ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಅಪರೂಪಕದ ಕಂಚಿನ ಸುಂದರ ಚತುರ್ಮುಖಶಿವ ವಿಗ್ರಹ ಶೋಧವಾಗಿದೆ. ಇದನ್ನು ಮಹೇಶ್ವರ ವಿಗ್ರಹವೆಂದು ಗುರುತಿಸಲಾಗಿದೆ. ಈ ಕಂಚಿನ ಶಿವನ ಶಿಲ್ಪವು ಕರ್ನಾಟಕದ ಕಂಚಿನ ಶಿಲ್ಪಗಳಲ್ಲೇ ಅತ್ಯಂತ ಭವ್ಯವಾದ ಪ್ರಾಚೀನ ಮತ್ತು ಅಪರೂಪದ ವಿಗ್ರಹವಾಗಿದೆ. ಈ ಶಿಲ್ಪದಲ್ಲಿ ಪದ್ಮಾಸನದಲ್ಲಿ ಕುಳಿತ ಅವನಿಗೆ ಅಘೋರ ವಾಮದೇವ, ತತ್ಪುರುಷ, ಸದ್ಯೋಜಾತ ಮುಖಗಳಿಗೆ, ಪ್ರಮಾಣ ಭದ್ದವಾದ ನಾಲ್ಕು ಜಟಾಮುಖಟವನ್ನು ಒಂದರಲ್ಲೇ ನಿರ್ಮಿಸಲಾಗಿದೆ. ಜಟಾಮುಕುಟ ಭಾಗವನ್ನು ಶಿವನ ಐದನೇ ಮುಖ ಈಶಾನವೆಂದು ಗುರುತಿಸಿದರೆ ಈ ವಿಗ್ರಹವನ್ನು ಪಂಚಮುಖ ಶಿವ ಎಂದು ಕರೆಯಬಹುದು. ದುರದೃಷ್ಟವಶಾತ್ ಈ ಶಿಲ್ಪದ ಮೂರು ಕೈಗಳು ಮುರಿದುಹೋಗಿವೆ. ಈ ಅಪರೂಪದ ಶಿಲ್ಪ ಈಗ ಮೈಸೂರಿನ ಪುರಾತತ್ವ ವಿಭಾಗದಲ್ಲಿ ರಕ್ಷಣೆಪಡೆದಿದೆ.

(ರು.ಮ.ಷಡಕ್ಷರಯ್ಯ, ಜಯಮ್ಮ, ೨೦೦೭, ಪು. ೬೮)

## ೪. ಶಾಕ್ತ ಶಿಲ್ಪಗಳು

ಮಾತೃ ದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯ ಆರಾಧಿಸುವ ಶಾಕ್ತಪಂಥವೆಂದು ಕರೆಯುತ್ತಾರೆ. ಭಾರತದಲ್ಲಿ ಶಾಕ್ತ ಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಿದ್ದೇವೆ. ವೈದಿಕ ಕಾಲದ ನಂತರ ಶಕ್ತಿದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡುಬರುತ್ತದೆ. ಶಾಕ್ತರ ಆರಾಧ್ಯ ದೇವತೆಯೇ ಶಕ್ತಿ ದೇವತೆ ಇವರುಗಳನ್ನು ಆದಿಶಕ್ತಿ ಪರಾಶಕ್ತಿ ಮಹಾಶಕ್ತಿ ಮಹಾದೇವಿ ಚೌಡೇಶ್ವರಿ, ದುರ್ಗಮ್ಮ, ಯಲ್ಲಮ್ಮ, ದ್ಯಾಮವ್ವ, ಮಾರೆಮ್ಮ ಮುಂತಾಗ ಕರೆಯುತ್ತಾರೆ. ಈ ಕಾಲದ ದೇವತೆಗಳನ್ನು ಗೃಹಸೂತ್ರಗಳು, ಸ್ಮೃತಿಗಳು, ಉಪನಿಷತ್ತುಗಳು ಪುರಾಣಗಳು ಮುಂತಾಗಿ ಸಾಹಿತ್ಯ ಆಕರಗಳು ವಿವಿಧ ಬಗೆಯಿಂದ ವರ್ಣಿಸುತ್ತದೆ. ಆಯಾ ಬುಡಕಟ್ಟು ನೆಲೆಸಿರುವ ಸ್ಥಳಗಳಲ್ಲಿ ಶಕ್ತಿ ದೇವೆತಯ ಆರಾಧನೆಯನ್ನು ಕಾಣಬಹುದು. ಅಲ್ಲದೆ ಗ್ರಾಮೀಣ ಮಟ್ಟದಿಂದ ಹಿಡಿದು ನಗರ ಮಟ್ಟದವರೆಗೂ ಗ್ರಾಮದೇವತೆಗಳ, ಶಕ್ತಿ ದೇವತೆಗಳ ಆರಾಧನೆಯನ್ನು ಕಾಣಬಹುದು. (ಎನ್.ಎಸ್.ಮಹಾಂತೇಶ, ೨೦೦೮, ಪು. ೧೦೭)

ಜಗತ್ತಿನಲ್ಲಿ ಯಾವ ದೇವರು ನಿಷ್ಕ್ರೀಯನಾಗುತ್ತಾನೊ ಆಶಕ್ತಿಯನ್ನು ತಮ್ಮ ಮೂಲಧಾರ ಎಂದು ಶಕ್ತ ಸಂಪ್ರದಾಯದವರು ಭಾವಿಸುತ್ತಾರೆ. ಶಕ್ತಿ ಇಲ್ಲದ ಎಲ್ಲ ದೇವರೂ ಅಪೂರ್ಣ ಹೆಣ್ಣು ದೇವತೆಯಶಕ್ತಿ ಮತ್ತು ಸ್ವರೂಪವನ್ನು ಗಂಡು ದೇವರ ತಾಯಿಯಾಗಿ, ಸಹೋದರಿಯಾಗಿ, ಪತ್ನಿಯಾಗಿ ನಾನಾ ಮಗ್ಗಲುಗಳಿಂದ ಕಾಣಲಾಗಿದೆ. ಇವುಗಳಲ್ಲಿ ಪತ್ನಿ ರೂಪದಲ್ಲಿರುವ ಶಕ್ತಿಯೂ ಹೆಚ್ಚಾಗಿ ಕಾಣುತ್ತೇವೆ. ಶಕ್ತಿ ಪೂಜೆ ಅಥವಾ ಮಾತೃದೇವತೆ ಉಪಾಸನೆಯು ಪ್ರಾಚೀನವಾದ ಸಿಂಧೂ ಸಂಸ್ಕೃತಿಯಲ್ಲಿ ಕಂಡುಬಂದಿದೆ. ಅಲ್ಲಿದೊರೆತ ಸ್ತ್ರೀ ವಿಗ್ರಹಗಳನ್ನು ಮಾತೃದೇವತೆಯ ವಿಗ್ರಹಗಳೆಂದು ಹೇಳಲಾಗಿದೆ.

ಈ ಪ್ರಸ್ತುತ ಅಧ್ಯಯನವು ನವಲಗುಂದ ತಾಲ್ಲೂಕಿನ ಶಾಕ್ತಶಿಲ್ಪಗಳ ಪ್ರಮುಖವಾಗಿ ದ್ಯಾವಪ್ಪ ದುರ್ಗಮ್ಮ ಎಂಬ ಶಕ್ತಿ ದೇವತೆಗಳನ್ನು ಕಾಣಬಹುದು. ತಾಲ್ಲೂಕಿನ ಪ್ರತಿಯೊಂದು ಹಳ್ಳಿಯಲ್ಲಿ ಗ್ರಾಮದೇವತೆಗಳು ಸಾಮಾನ್ಯವಾಗಿರುತ್ತವೆ. ಈ ದೇವತೆಗಳ ಆರಾಧನೆಯಿಂದ ಕಾಯಿಲೆಗಳು ಮತ್ತು ವಿಘ್ನಗಳು ದೂರವಾಗುತ್ತವೆಂಬ ನಂಬಿಕೆಯಿದೆ. ಹೀಗಾಗಿ ಈ ದೇವತೆಗಳ ಆರಾಧನೆಗೆ ಹೆಚ್ಚು ಮಹತ್ವವನ್ನು ನೀಡಲಾಗಿದೆ. ಮಾತೃದೇವತೆಗಳೆನಿಸಿದ ಗಜಲಕ್ಷ್ಮಿ ಶಿಲ್ಪಗಳು ಕಾಣಿಸಿವೆ. ಕೆಲವು ಕಡೆ ಸಪ್ತಮಾತೃಕೆಯರ ವಿಗ್ರಹಗಳು ಇವೆ. ಇವುಗಳ ಕಾಲ ಸುಮಾರು ಕ್ರಿ.ಶ. ೮ನೇ ಶತಮಾನ ಇವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ವಿವರಿಸಲಾಗಿದೆ.

| | | | |
|---|---|---|---|
| ೧. | ಗ್ರಾಮ | : | ಅರೆಕುರಹಟ್ಟಿ |
| | ಶಿಲ್ಪ | : | ಸಪ್ತಮಾತೃಕೆಯರು |
| | ಸ್ಥಳ | : | ಊರಮಧ್ಯದಲ್ಲಿದೆ |
| | ಕಾಲಮಾನ | : | ಕ್ರಿ.ಶ. ಸುಮಾರು ೧೨ ನೇ ಶತಮಾನ |
| | ಅಳತೆ | : | ೧೬.೨x೩.೨ ಸೆ.ಮೀ. |
| | ಕೈಯಿಗಳು | : | ನಾಲ್ಕು |
| | ಆಯುಧಗಳು | : | ಶಂಖ, ಖಡ್ಗ |
| | ಆಭರಣಗಳು | : | ಮಣಿಸರಗಳು |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಕಕ್ಷಾಸನ ಪಟ್ಟಿಕೆಯಲ್ಲಿರುವ ಸಪ್ತಮಾತೃಕೆಯ ಉಬ್ಬುಶಿಲ್ಪಗಳಿವೆ. ನವಿಲು, ನಂದಿ ನವ್ಯಾಸನದಲ್ಲಿ ಕುಳಿತಿರುವುದು, ಪಟ್ಟಿಕೆಯಲ್ಲಿ ನಾಲ್ಕು ಶಿಲ್ಪಗಳು ಜೋಡಣೆಯಾಗಿವೆ.

| | | | |
|---|---|---|---|
| ೨. | ಗ್ರಾಮ | : | ಹಾಳುಕುಸುಗಲ್ |
| | ಸ್ಥಳ | : | ಊರಮಧ್ಯದಲ್ಲಿದೆ |
| | ಕಾಲಮಾನ | : | ಕ್ರಿ.ಶ.. ಸುಮಾರು ೧೨ ನೇ ಶತಮಾನ |
| | ಅಳತೆ | : | ೧೧೦x೮೫ ಸೆ.ಮೀ. |
| | ಕೈಗಳು | : | ಎರಡು |
| | ಆಯುಧಗಳು | : | ಪದ್ಮ |
| | ಆಭರಣಗಳು | : | ಕರಂಡ ಮುಕುಟ, ಕರ್ಣಕುಂಡಲ, ಕಂಠಿಹಾರ, ಮಣಿಸರ, ತೋಳಬಂಧಿ, ಕಟಿವಸ್ತ್ರ, ಕಾಲ್ಕಡಗ, ಕೈಬಳೆ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ಪದ್ಮಪೀಠದ ಮೇಲೆ ಆಸೀನಳಾಗಿರುವ ಗಜಲಕ್ಷ್ಮಿ ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದುಕೊಂಡಿದ್ದಾಳೆ. ಇವಳ ಪಾರ್ಶ್ವಗಳಲ್ಲಿ ಎರಡು ಆನೆಗಳು ಅಭಿಷೇಕದಲ್ಲಿ ನೀಚವಾಗಿದೆ. ಈ ಶಿಲ್ಪವು ನೈಜವಾಗಿದ್ದು ಅಧ್ಯಯನ ದೃಷ್ಟಿಯಿಂದ ಮಹತ್ವವಾಗಿದೆ.

| | | |
|---|---|---|
| ಗ್ರಾಮ | : | ತಲೆಮೊರಬ |
| ಶಿಲ್ಪ | : | ಗಜಲಕ್ಷ್ಮಿ |
| ಸ್ಥಳ | : | ಊರಮಧ್ಯದಲ್ಲಿದೆ |
| ಕಾಲಮಾನ | : | ಕ್ರಿ.ಶ. ಸುಮಾರು ೧೨ ನೇ ಶತಮಾನ |
| ಅಳತೆ | : | ೧೧೦x೮೫ ಸೆ.ಮೀ. |
| ಕೈಯಿಗಳು | : | ಎರಡು |
| ಆಯುಧಗಳು | : | ಪದ್ಮ |
| ಆಭರಣಗಳು | : | ಕರಂಡ ಮುಕುಟ, ಕರ್ಣಕುಂಡಲ, ಕಂಠಿಹಾರ, ಮಣಿಸರ, ತೋಳಬಂಧಿ, ಕಟಿವಸ್ತ್ರ, ಕಾಲ್ಕಡಗ, ಕೈಬಳೆ, ಬೆರಲುಂಗುರ ಇತ್ಯಾದಿ |
| ಮಾಧ್ಯಮ | : | ಕಪ್ಪುಶಿಲೆ |
| ಸ್ಥಿತಿ | : | ಉತ್ತಮ |

ಕಲ್ಮೇಶ್ವರ ಗುಡಿಯ ಬಳಿಯಲ್ಲಿರುವ ಗಜಲಕ್ಷ್ಮಿ ಶಿಲ್ಪ ಸುಂದರವಾಗಿದೆ. ಪದ್ಮಾಸನದಲ್ಲಿ ಕುಳಿತ ಲಕ್ಷ್ಮಿಗೆ ಬದಿಗಳಲ್ಲಿನಿಂತ ಆನೆಗಳೆರಡು ತಮ್ಮ ಸೊಂಡಿಲುಗಳಲ್ಲಿ ಮಣಿಗಳನ್ನು ಹಿಡಿದು ದೇವಿಯ ತಲೆಯ ಮೇಲೆ ಅವುಗಳಿಂದ ನೀರನ್ನು ಸುರಿಸುತ್ತ ಅಭಿಷೇಕಮಾಡುತ್ತಿವೆ. ಈ ಶಿಲ್ಪಫಲಕದ ಮೇಲಿನ ಅರ್ಧ ವೃತ್ತಾಕರಾದ ಸುತ್ತಲೂ ಲತಾ ಸುರಳಿ ನಡುವೆ ಕೀರ್ತಿ ಮುಖವಿದೆ. ಆದರೆ ಬುಡದಲ್ಲಿ ಮಕರಗಳಲ್ಲಿ ಪೀಠದಲ್ಲಿರುವಂತೆ ಕಾಣುತ್ತದೆ. (ರು.ಮ ಕ್ಷಡಕ್ಷರಯ್ಯ, ಜಯಮ್ಮ, ೨೦೦೭, ಪು. ೯೭)

| | | | |
|---|---|---|---|
| ೪. | ಗ್ರಾಮ | : | ಅಣ್ಣಿಗೇರಿ |
| | ಶಿಲ್ಪ | : | ಪಾರ್ವತಿಯಶಿಲ್ಪ |
| | ಸ್ಥಳ | : | ಅಮೃತೇಶ್ವರ ದೇವಾಲಯದ ಅಂತರಾಳದಲ್ಲಿ |
| | ಕಾಲಮಾನ | : | ಕ್ರಿ.ಶ. ಸುಮಾರು ೧೨ ಮತ್ತು ೧೩ ನೇ ಶತಮಾನ |
| | ಅಳತೆ | : | ಸು. ೨ ಅಡಿ ಅಗಲ, ೪ ೧/೨ ಅಡಿ ಎತ್ತರ |
| | ಕೈಗಳು | : | ಎರಡು |
| | ಆಯುಧಗಳು | : | ಪದ್ಮ, ಅಭಯಮುದ್ರೆ |
| | ಆಭರಣಗಳು | : | ಹಾರ ಸರ, ಕೈಕಡಗ, ಕಾಲ್ಗಡಗ, ಕುಂಡಲ |
| | ಮಾಧ್ಯಮ | : | ಆಧುನಿಕ |
| | ಸ್ಥಿತಿ | : | ಉತ್ತಮ |

ಪಾರ್ವತಿಯ ಶಿಲ್ಪವು ದ್ವಿಭುಜಧಾರಿಯಾದ ಪಾರ್ವತಿಯು ಬಲಗೈಯಲ್ಲಿ ಪದ್ಮ ಹಿಡಿದು ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಕಿರೀಟಧಾರಿಯಾಗಿರುವಳು ಕಿರೀಟದಲ್ಲಿ ಶಿವಲಿಂಗವನ್ನು ತೋರಿಸುವುದು ಅಪರೂಪವಾಗಿದೆ. ಹಾರ, ಸರ, ಕೈಕಡಗ, ಕಾಲ್ಗಡಗ, ಕುಂಡಲ ಮುಂತಾದ ಆಭರಣಗಳಿಂದ ಅಲಂಕೃತ ಗೊಂಡಿರುವಳು ಶಿಲ್ಪದ ಸುತ್ತಲೂ ಸ್ತಂಭ ಪ್ರಭಾವಳಿ ಇದೆ. ಮೇಲೆ ಮಧ್ಯದಲ್ಲಿ ಕೀರ್ತಿಮುಖ ಇರುವುದು ಈ ಶಿಲ್ಪ ಆಧುನಿಕ ಕಾಲದ್ದಾಗಿದೆ. (ರು.ಮ. ಷಡಕ್ಷರಯ್ಯ ೨೦೦೭, ಪುಟ ೯೭)

೫. ಗ್ರಾಮ : ಬೆಳವಟಿಗೆ

ಶಿಲ್ಪ : ಗಜಲಕ್ಷ್ಮಿ ಶಿಲ್ಪ

ಸ್ಥಳ : ಗ್ರಾಮದ ಮಧ್ಯಭಾಗದಲ್ಲಿದೆ.

ಕಾಲಮಾನ : ಕ್ರಿ.ಶ. ಸುಮಾರು ೧೨ ನೇ ಶತಮಾನ

ಅಳತೆ : ೧೧೦x೮೫ ಸೆ.ಮೀ.

ಕೈಗಳು : ಎರಡು

ಆಯುಧಗಳು : ಪದ್ಮ

ಆಭರಣಗಳು : ಹಾರ, ಸರ, ಕಿರೀಟ ಕಡಗ ಮುಂತಾದ್ದು

ಮಾಧ್ಯಮ : ಆಧುನಿಕ

ಸ್ಥಿತಿ : ಉತ್ತಮ

ಗಜಲಕ್ಷ್ಮಿ ಶಿಲ್ಪ ಗ್ರಾಮದ ಮಧ್ಯಭಾಗದಲ್ಲಿದೆ, ಶಿಲ್ಪದಲ್ಲಿ ದ್ವಿಭುಜದಾರಿ ಲಕ್ಷ್ಮೀಯ ಪದ್ಮಾಸನದಲ್ಲಿ ಕುಳಿತಿದ್ದಾಳೆ ತನ್ನ ಎರಡೂ ಕೈಗಳಲ್ಲಿ ಪದ್ಮಗಳನ್ನು ಹಿಡಿದಿರುವಳು ಲಕ್ಷ್ಮಿಗೆ ಗಜಗಳೆರಡು ತಮ್ಮ ಸೊಂಡಿಲಲ್ಲಿ ಹಿಡಿದ ಕುಂಬಗಳಿಂದ ಜಲಾಭಿಷೇಕ ಮಾಡುತ್ತಿವೆ ಗಜಗಳು ಆಭರಣಗಳಿಂದ ಅಲಂಕೃತಗೊಂಡಿವೆ. ಲಕ್ಷ್ಮೀಯು ಹಾರ, ಸರ, ಕಿರೀಟ, ಕಡಗ, ಮುಂತಾದ ಆಭರಣಗಳಿಂದ ಅಲಂಕೃತಗೊಂಡಿರುವಳು. ಲಕ್ಷ್ಮೀಯ ತಲೆಯ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. (ರು.ಮ.ಷಡಕ್ಷರಯ್ಯ ೨೦೦೭, ಪುಟ ೯೯ ಜಯಮ್ಮ)

೬. ಗ್ರಾಮ : ಅಮರಗೋಳ

ಶಿಲ್ಪ : ಗಜಲಕ್ಷ್ಮಿ

ಸ್ಥಳ : ಬನ್ನಿಮರದ ಕೆಳಗೆ

ಕಾಲಮಾನ : ಕ್ರಿ.ಶ. ಸುಮಾರು ೧೨ ನೇ ಶತಮಾನ

ಅಳತೆ : ೧೧೦x೮೫ ಸೆ.ಮೀ.

ಕೈಯಿಗಳು : ಎರಡು

ಆಯುಧಗಳು : ಪದ್ಮ

ಆಭರಣಗಳು : ಕರಂಡ ಮುಕುಟ, ಕರ್ಣಕುಂಡಲ, ಕಂಠಿಹಾರ, ಮಣಿಸರ, ತೋಳಬಂಧಿ, ಕಾಲ್ಕಡಗ, ಕೈಬಳೆ, ಬೆರಲುಂಗುರ ಇತ್ಯಾದಿ

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ಊರಿನ ಹೊರಗೆ ಬನ್ನಿಮರದ ಕೆಳಗೆ ಗಜಲಕ್ಷ್ಮಿ ಶಿಲ್ಪ ಕಂಡುಬರುತ್ತದೆ. ಶಿಲ್ಪ ಸುಂದರವಾಗಿದ್ದು ಪದ್ಮಾಸನದಲ್ಲಿ ಕುಳಿತ ಲಕ್ಷ್ಮೀಗೆ ಬದಿಗಳಲ್ಲಿ ನಿಂತ ಆನೆಗಳೆರಡು ತಮ್ಮ ಸೊಂಡಿಲುಗಳಲ್ಲಿ ಮಗಿಲುಗಳನ್ನು ಹಿಡಿದು ದೇವಿಯ ತಲೆಯ ಮೇಲೆ ಅವುಗಳಿಂದ ನೀರನ್ನು ಸುರಿಸುತ್ತಾ ಅಭಿಷೇಕ ಮಾಡುತ್ತಿವೆ. ಈ ಶಿಲ್ಪ ಫಲಕದ ಮೇಲಿನ ಅರ್ಧ ವೃತ್ತಾಕಾರದ ಸುತ್ತಲೂ ಲತಾ ಸುರಿಳಿ ನಡುವೆ ಕೀರ್ತಿಮುಖವಿದೆ ಆದರೆ ಬುಡದಲ್ಲಿ ಮಕರಗಳಿಲ್ಲ ಇದು ಕಲ್ಯಾಣಿ ಚಾಲುಕ್ಯರ ಕಾಲದೆಂದು ಸ್ಪಷ್ಟವಾಗುತ್ತದೆ. (ರು.ಮ.ಷಡಕ್ಷರಯ್ಯ, ೨೦೦೭, ಪುಟ ೯೮ ಜಯಮ್ಮ)

೭. ಗ್ರಾಮ : ಬಲ್ಲರವಾಡ

ಶಿಲ್ಪ : ಗಜಲಕ್ಷ್ಮಿ

ಸ್ಥಳ : ಕೆರೆಹತ್ತಿರದಲ್ಲಿದೆ

ಕಾಲಮಾನ : ಕ್ರಿ.ಶ. ಸುಮಾರು ೧೨ ನೇ ಶತಮಾನ

ಅಳತೆ : ೧೧೦x೮೫ ಸೆ.ಮೀ.

ಕೈಗಳು : ಎರಡು

ಆಯುಧಗಳು : ಪದ್ಮ

ಆಭರಣಗಳು : ಮಣಿಸರ, ತೋಳಬಂಧಿ, ಕಾಲ್ಕಡಗ, ಕೈಬಳೆ, ಬೆರಲುಂಗುರ ಕರ್ಣಕುಂಡಲೀ, ಕಂಠಿಹಾರ ಇತ್ಯಾದಿ

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ಪದ್ಮ ಪೀಠದ ಮೇಲೆ ಆಸೀನಳಾಗಿರುವ ಗಜಲಕ್ಷ್ಮಿ ಎರಡೂ ಕೈಗಳಲ್ಲಿ ಪದ್ಮಗಳನ್ನು ಹಿಡಿದುಕೊಂಡಿದ್ದಾಳೆ. ಇವಳ ಪಾರ್ಶ್ವಗಳಲ್ಲಿ ಎರಡು ಆನೆಗಳು ಅಭಿಷೇಕ ಮಾಡುತ್ತಿವೆ.

**೫. ಗಾಣಪತ್ಯ ಶಿಲ್ಪಗಳು**

ಗಣಪತಿಯ ಭಾರತೀಯ ಜನರಿಗೆ ಶುಭ ಹಾಗೂ ವೈಭವದ ಸಂಕೇತ. ಶಿವ, ಬ್ರಹ್ಮಾಂಡ, ಸ್ಕಂದ, ಬ್ರಹ್ಮ ವೈವರ್ತ, ಮತ್ಸ್ಯ, ಪದ್ಮ ಮೊದಲಾದ ಪುರಾಣಗಳು ಹಾಗೂ ರೂಪಮಂಡನ, ಆಗಮಗಳು ಗಣಪತಿಯನ್ನು ಉಲ್ಲೇಖಿಸಿವೆ. ಶಿವಪುರಾಣವು ಗಣಪತಿಯ ಹುಟ್ಟಿನ ಬಗ್ಗೆ ತಿಳಿಸುತ್ತವೆ. ಗಣಪತಿಯು ನಾಲ್ಕು ಆರು ಹತ್ತು ಹಾಗೂ ಹದಿನಾರು ಕೈಗಳನ್ನು ಹೊಂದಿರುತ್ತವೆ. ಅವುಗಳಲ್ಲಿ ನಾಲ್ಕುಕೈಗಳಿರುವ ಗಣಪತಿ ಸಾಮಾನ್ಯ ಗಣಪತಿಯು ನಾನಾ ರೂಪಗಳಿಂದ ಪೂಜೆಗೊಳ್ಳುವನು ಅವು ಬಾಲಗಣಪತಿ, ತರುಣಗಣಪತಿ, ಹೇರಂಬ, ಪ್ರಸನ್ನ ಗಣಪತಿ ಬಾಲಚಂದ್ರ, ಸುರಪಕರಣ ಹಾಗೂ ಏಕದಂತ ಶಿಲ್ಪಗಳಲ್ಲಿ ಗಣಪತಿಯನ್ನು ಸುಖನಾಸಿದಲ್ಲಿ ಕುಳಿತಂತೆ, ನಿಂತಂತೆ

ಮತ್ತು ನೃತ್ಯಭಂಗಿಯಲ್ಲಿಯೂ ಕಾಣುತ್ತೇವೆ. ಸಾಮಾನ್ಯವಾಗಿ ಗಣಪತಿಯ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದ ಆನೆಮುಖ ಸುತ್ತಿದ ಸೊಂಡಿಲು (ವಕ್ರತುಂಡ) ದೊಡ್ಡಹೊಟ್ಟೆ (ಮಹೋದರ) ನಾಲ್ಕು ಕೈಗಳಿಂದ ಕೂಡಿದವನಾಗಿ ಪಾಶ, ಅಂಕುಶ ಅಭಯ ಮಾದಕಧಾರಿಯಾಗಿ ಕಂಡುಬರುತ್ತಾನೆ. (ದತ್ತಾತ್ರೇಯ ಜಿ.ಕುಲಕರ್ಣಿ, ೨೦೦೬, ಪುಟ ೨೩೬ ಅಪ್ರಕಟಿತ)

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸುವಂತೆ ನವಲಗುಂದ ತಾಲ್ಲೂಕನ್ನು ಅಲವಡಿಸಿಕೊಂಡು ಕೆಲವು ಗಣಪತಿ ಶಿಲ್ಪಗಳನ್ನು ಗುರುತಿಸಲಾಗಿದೆ. ಇಲ್ಲಿ ಕೆಲವು ಗಣಪತಿ ಮೂರ್ತಿಶಿಲ್ಪಗಳು ಕಂಡುಬರುತ್ತವೆ.

| | | | |
|---|---|---|---|
| ೧. | ಗ್ರಾಮ | : | ಗುಡಿಸಾಗರ |
| | ಶಿಲ್ಪ | : | ಗಣಪತಿ |
| | ಸ್ಥಳ | : | ಊರನಡುವೆ ಇದೆ. |
| | ಕಾಲಮಾನ | : | ೧೨-೧೩ ನೇ ಶತಮಾನ |
| | ಅಳತೆ | : | ೫೨x೪೫ ಸೆ.ಮೀ. |
| | ಕೈಗಳು | : | ನಾಲ್ಕು |
| | ಆಯುಧಗಳು | : | ತ್ರಿಶೂಲ, ಭಗ್ನ |
| | ಆಭರಣಗಳು | : | ಕರಂಡಮುಕುಟ, ಕರ್ಣಕುಂಡಲ |
| | ಮಾಧ್ಯಮ | : | ಕಪ್ಪುಶಿಲೆ |
| | ಸ್ಥಿತಿ | : | ಉತ್ತಮ |

ದೇವಾಲಯದಲ್ಲಿ ಇರುವಂತ ಈ ಶಿಲ್ಪವು ಕುಳಿತು ಕೊಂಡಿರುವ ಭಂಗಿಯಲ್ಲಿದೆ. ಬಲ ಕೈಯಲ್ಲಿ ಪರಶು ಎಡಗೈಯಲ್ಲಿ ಮೋದಕ ಕಂಡುಬರುತ್ತದೆ. ಈ ಮೂರ್ತಿ ಚೌಕಕಾರದ ಪೀಠದಲ್ಲಿ ಕುಳಿತಿದೆ. ಕೆಳಭಾಗದಲ್ಲಿ ಗಣಪತಿಯ ವಾಹನವಾದ ಮೂಷಿಕ ಕಂಡುಬರುತ್ತದೆ. ಗಣಪತಿಯ ಬಲಭಾಗದಲ್ಲಿ ಎರಡು ನಾಗದೇವರ ಶಿಲ್ಪಮೂರ್ತಿಕಂಡುಬರುತ್ತದೆ. ಅದರ ಬಲಭಾಗದಲ್ಲಿ ವಿಷ್ಣುವಿನ ಸುಂದರವಾದ ಮೂರ್ತಿಯಿದೆ.

| | | | |
|---|---|---|---|
| ೨. | ಗ್ರಾಮ | : | ನವಲಗುಂದ |
| | ಶಿಲ್ಪ | : | ಗಣಪತಿ |
| | ಸ್ಥಳ | : | ವಿನಾಯಕ ಪೇಟೆ |
| | ಕಾಲಮಾನ | : | ಆಧುನಿಕ |
| | ಅಳತೆ | : | ೫೨x೩೧ ಸೆ.ಮೀ. |
| | ಕೈಗಳು | : | ನಾಲ್ಕು |
| | ಆಯುಧಗಳು | : | ಪರಶು, ಅಂಕುಶ |
| | ಆಭರಣಗಳು | : | ಹಾರ, ಕೈಬಳೆ, ಕಾಲ್ಗಡಗ, ಕಿರೀಟ, ಕಂಠಹಾರ |

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ಗರ್ಭಗೃಹದಲ್ಲಿ ಗಣಪತಿಯ ಮೂರ್ತಿಯಿದೆ. ಇದನ್ನು ಎತ್ತರವಾದ ಪಾಣಿಪೀಠದ ಮೇಲೆ ಪ್ರತಿಷ್ಠಾಪಿಸಲಾಗಿದೆ. ಸುಮಾರು ನಾಲ್ಕು ಅಡಿ ಎತ್ತರವಿರುವ ಮೂರ್ತಿಯು ಸುಂದರವಾದ ಅಲಂಕಾರಗಳನ್ನು ಹೊಂದಿದೆ. ಕೈಗಳಲ್ಲಿ ಪರಶು ಅಂಕುಶ ಮಾದಕಗಳು ಕಂಡುಬರುತ್ತವೆ. ಗಣಪತಿಯ ವಿಗ್ರಹದ ಕೆಳಭಾಗದಲ್ಲಿ ಗಣೇಶನ ವಾಹನವಾದ ಮೂಷಿಕ ಇದೆ.

**೬. ಜೈನ ಶಿಲ್ಪಗಳು**

ಭಾರತೀಯ ಸಂಸ್ಕೃತಿಗೆ ಕರ್ನಾಟಕ ಜೈನ ಮೂರ್ತಿಶಿಲ್ಪಗಳ ಕೊಡುಗೆ ಅಪರಾವಾದುದು ಜೈನ ತೀರ್ಥಂಕರು ಉತ್ತರಭಾರತದಲ್ಲೇ ಜನಿಸಿದರೂ ಜೈನಶಾಸ್ತ್ರ ಗ್ರಂಥಗಳನ್ನು ರಚಿಸಿದ ಆಚಾರ್ಯರು ಹೆಚ್ಚಿನವರು ಕರ್ನಾಟಕದವರು. ಪ್ರಾಚೀನ ಕರ್ನಾಟಕದಲ್ಲಿ ಶ್ರವಣಬೆಳಗೋಳ ಬನವಾಸಿ, ಕೊಪ್ಪಳ, ಹಲಸಿ, ಹುಮಚ ಮುಂತಾದ ಕೆಡೆಗಳಲ್ಲಿ ಜೈನ ಕೇಂದ್ರಗಳು ಪ್ರವರ್ಧಮಾನಕ್ಕೆ ಬಂದವು. ಕ್ರಿ.ಶ. ಆರಂಭದಲ್ಲಿ ಕಾಲದಲ್ಲಿ ರಾಜಾಶ್ರಯ ದೊರೆತಿದ್ದರಿಂದ ಜೈನಧರ್ಮ ಹೆಚ್ಚು ಪ್ರವರ್ಧಮಾನಕ್ಕೆ ಬಂತು. ಜೈನಧರ್ಮವು ಅಭಿವೃದ್ಧಿಯಾಯಿತು. ಅದಕ್ಕೆ ಸಂಬಂಧಿಸಿದಂತೆ ಮೂರ್ತಿಶಿಲ್ಪ ಚಿತ್ರಕಲೆ, ಮುಂತಾದವುಗಳಿಗೂ ಪ್ರಾರಂಭವಾದವು. ಜೈನಧರ್ಮ ಬೋಧಿಸಿದ ತೀರ್ಥಂಕರು, ದಿವ್ಯದೃಷ್ಟಿಯನ್ನು ಪಡೆದು ಮಾನವರಾದರು. ದೇವತಾ ಪುರುಷರಂತೆ ಆರಾಧಿಸಲ್ಪಟ್ಟರು. (ಎಂ.ಚಿದಾನಂದಮೂರ್ತಿ ೧೯೭೮, ಪುಟ ೭೩)

ಪ್ರಸುತ್ತ ಅಧ್ಯಯನವು ನವಲಗುಂದ ತಾಲೂಕಿನ ಜೈನಶಿಲ್ಪಕ್ಕೆ ಸೀಮಿತ ಮಾಡಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಮೂರ್ತಿಶಿಲ್ಪಗಳಲ್ಲಿ ಒಂದು ತುಲನಾತ್ಮಕ ಅಧ್ಯಯನ ಮಾಡಿ ನೋಡಿದಲ್ಲಿ ಜೈನಮೂರ್ತಿ ಹಿಂದೂ ಮೂರ್ತಿಶಿಲ್ಪಗಳಂತೆ ಹೆಚ್ಚು ಬೆಳವಣಿಗೆ ಕಂಡಿಲ್ಲ.

ಇತ್ತೀಚೆಗೆ ಈ ತಾಲ್ಲೂಕಿನ ೫ಲ ಗ್ರಾಮಗಳಲ್ಲಿ ಮಾತ್ರ ಜೈನಾವಶೆಷಗಳು ಕಂಡುಬಂದಿವೆ. (ಎ.ವ್ಹಿ.ನಾಗನೂರ, ಅಪ್ಪಣ್ಣ ಎನ್.ಹಂಜೆ ೨೦೦೬, ಪುಟ ೧೨೨)

೧. ಗ್ರಾಮ : ಅಣ್ಣಿಗೇರಿ

ಶಿಲ್ಪ : ಪಾರ್ಶ್ವನಾಥನಶಿಲ್ಪ

ಸ್ಥಳ : ಬಸ್ತಿಓಣಿಯಲ್ಲಿದೆ.

ಕಾಲಮಾನ : ಕ್ರಿ.ಶ. ಸುಮಾರು ೧೨ ನೇ ಶತಮಾನ

ಅಳತೆ : ೧೦೫x೩೭ ಸೆ.ಮೀ.

ಕೈಗಳು : ಎರಡು

ಆಯುಧಗಳು : ಪದ್ಮ, ಪದ್ಮ

ಆಸನ : ಪರ್ಯಂಕಾಸನ.

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ಗರ್ಭಗೃಹದಲ್ಲಿ ಪಾರ್ಶ್ವನಾಥಶಿಲ್ಪ ಪೂಜೆಗೊಳ್ಳುತ್ತಿದ್ದು. ಸು. ೫ ಅಡಿ ಎತ್ತರವಿದೆ. ಈತನು ಪದ್ಮಾಸನದಲ್ಲಿ ಮತ್ತು ಯೋಗಮುದ್ರೆಯಲ್ಲಿ ಕುಳಿತಿದ್ದಾನೆ. ತಲೆಯಮೇಲಿನ ಛತ್ರಿಯನ್ನು ತೋರಣದಿಂದ ಅಲಂಕರಿಸಲಾಗಿದೆ. ಭುಜದ ಬದಿಗಳಲ್ಲಿ ಸೇವಕರು ಮಕರ ಸ್ತಂಭಗಳ ಮೇಲೆ ನಿಂತಿರುವರು.

೨. ಗ್ರಾಮ : ತುಪ್ಪದಕುರಹಟ್ಟಿ

ಶಿಲ್ಪ : ತೀರ್ಥಂಕರು

ಸ್ಥಳ : ಪಂಚಲಿಂಗೇಶ್ವರ ದೇವಾಲಯದ ಮುಂದೆ

ಕಾಲಮಾನ : ಕ್ರಿ.ಶ. ಸುಮಾರು ೧೨ ನೇ ಶತಮಾನ

ಕೈಗಳು : ಎರಡು

ಆಸನ : ಪರ್ಯಂಕಾಸನ

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ತೀರ್ಥಂಕರು ಪರ್ಯಾಂಕಾಸನದಲ್ಲಿರುವ ಈತನು ಧ್ಯಾನ ಮುದ್ರೆಯಲ್ಲಿದ್ದಾನೆ. ಅದೇ ದೇವಾಲಯದ ದಕ್ಷಿಣ ಬದಿಯ ಹೊರಭಿತ್ತಿಯಲ್ಲಿ ಸಮಕಾಲೀನ ಸಿಂಹಪೀಠವಿದೆ ಇದರ ಮುಖದಲ್ಲಿದೆ. ಈ ಗ್ರಾಮದಲ್ಲಿ ಸುಮಾರು ೧೧-೧೨ ನೇಯ ಶತಮಾನದ ಇಲ್ಲಿನ ಅವಶೇಷಗಳು ಸಾಬೀತು ಪಡಿಸುತ್ತವೆ. ಇಲ್ಲಿ ಜಿನಾಲಯವೊಂದು ಇತ್ತು.

೩. ಗ್ರಾಮ : ನಾವಳ್ಳಿ

ಶಿಲ್ಪ : ತೀರ್ಥಂಕರ

ಸ್ಥಳ : ದೇವಸ್ಥಾನದ ಮುಂದೆ

ಕಾಲಮಾನ : ಕ್ರಿ.ಶ. ಸುಮಾರು ೧೨ ನೇ ಶತಮಾನ

ಅಳತೆ : ೯೩x೬೩ ಸೆ.ಮೀ.

ಕೈಗಳು : ಎರಡು

ಆಸನ : ಪರ್ಯಂಕಾಸನ

ಮಾಧ್ಯಮ : ಕಪ್ಪುಶಿಲೆ

ಸ್ಥಿತಿ : ಉತ್ತಮ

ಪರ್ಯಂಕಾಸನದಲ್ಲಿರುವ ತೀರ್ಥಂಕರು ಯೋಗಮುದ್ರೆಂುಲ್ಲಿದ್ದಾರೆ. ತೀರ್ಥಂಕರ ಶಿಖರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಇಕ್ಕೆಲಗಳಲ್ಲಿ, ಇಬ್ಬರು ದ್ವಿಭುಜ ಚಾಮರಧಾರರು ದ್ವಿಭಂಗಿಯಲ್ಲಿ ನಿಂತಿದ್ದಾರೆ. ಈ ಶಿಲ್ಪವು ಕಪ್ಪುಮಿಶ್ರಿತ ನೀಲಿಛಾಯಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ.

೪. ಗ್ರಾಮ : ಕಿತ್ತೂರು

ಶಿಲ್ಪ : ತೀರ್ಥಂಕರ

ಸ್ಥಳ : ದೇವಾಲಯ ಮುಂಭಾಗದಲ್ಲಿ ಹನುಮಂತದೇವರ ಗುಡಿ

ಕಾಲಮಾನ : ಕ್ರಿ.ಶ. ಸುಮಾರು ೧೧-೧೨ ನೇ ಶತಮಾನ

ಅಳತೆ : ೮೩x೬೧ ಸೆ.ಮೀ.

ಕೈಗಳು : ಎರಡು

ಮಾಧ್ಯಮ : ಕಪ್ಪುಶಿಲೆ

ಆಸನ : ಪರ್ಯಂಕಾಸನ

ಸ್ಥಿತಿ : ಉತ್ತಮ

ಜೈನ ತೀರ್ಥಂಕರ ಭಗ್ನ ಅವಶೇಷ ಮೂರ್ತಿಯಾಗಿದ್ದು ಇದು ಪರ್ಯಂಕಾಸನದಲ್ಲಿರುತ್ತದೆ. ಈತನು ದ್ಯಾನಮುದ್ರೆಯಲ್ಲಿದ್ದಾನೆ. ಈತನ ಶಿರದ ಹಿಂಭಾಗದಲ್ಲಿ ಪ್ರಭಾವಮಂಡಲವಿದ್ದು ಇಕ್ಕೆಲಗಳಲ್ಲಿ ಇಬ್ಬರು ಚಾಮರಧಾರರು ದ್ವಿಭಂಗಿಯಲ್ಲಿ ನಿಂತದ್ದಾರೆ. ಎಡಗಡೆಯ ಚಾಮರಧಾರಿ ಶಿಲ್ಪದ ಅರ್ಧಭಾಗ ಭಗ್ನವಾಗಿದೆ.

೫. ಗ್ರಾಮ : ಅಹಟ್ಟಿ

ಶಿಲ್ಪ : ತೀರ್ಥಂಕರು

ಸ್ಥಳ : ದೇವಸ್ಥಾನದ ಮುಂದೆ

ಕಾಲಮಾನ : ಕ್ರಿ.ಶ. ಸುಮಾರು ೧೨-೧೩ ನೇ ಶತಮಾನ

ಅಳತೆ : ೧೩೧x೭೩ ಸೆ.ಮೀ.

ಕೈಗಳು : ಎರಡು

ಮಾಧ್ಯಮ : ಕಪ್ಪುಶಿಲೆ

ಆಸನ : ಕಾಯೋತ್ಸರ್ಗ

ಸ್ಥಿತಿ : ಉತ್ತಮ

ತೀರ್ಥಂಕರು ಸಮಭಂಗಿಯಲ್ಲಿ ನಿಂತಿರುವ ವಿಗ್ರಹ ಇದಾಗಿದೆ. ಇದು ಬಹಳ ಸುಂದರ ಕೆತ್ತನೆಯನ್ನು ಹೊಂದಿದೆ. ತೀರ್ಥಂಕರ ಬದಿಗಳಲ್ಲಿ ಕೆಳಗಡೆ ಯಕ್ಷ ಯಕ್ಷಿಯರಾದ ಧರಣೇಂದ್ರ ಮತ್ತು ಪದ್ಮಾವತಿಯು ಇದ್ದಾರೆ.

## ಅಧ್ಯಾಯ ಆರು

# ಸಮಾರೋಪ

ಪುರಾತತ್ವ ಆಕರಗಳಲ್ಲಿ ಶಾಸನಗಳು ಮತ್ತು ದೇವಾಲಯಗಳು ಸಮಕಾಲೀನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಸಾಹಿತ್ಯಿಕ, ಸಾಂಸ್ಕೃತಿಕ ಮುಂತಾದ ವಿಷಯಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ತುಂಬಾ ಸಹಾಯಕವಾಗುತ್ತವೆ. ಈ ಹಿನ್ನೆಲೆಯಲ್ಲಿ ನವಲಗುಂದ ತಾಲ್ಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಶಾಸನಗಳು, ದೇವಾಲಯಗಳು ಮತ್ತು ಶಿಲ್ಪಗಳನ್ನು ಒಂದೆಡೆಗೆ ಸಂಗ್ರಹಿಸಿ ಈ ತಾಲ್ಲೂಕಿನ ಸಾಂಸ್ಕೃತಿಕ ಇತಿಹಾಸವನ್ನು ವಸ್ತುನಿಷ್ಠವಾಗಿ ಪುನಾರಚಿಸುವ ಉದ್ದೇಶದೊಂದಿಗೆ ಪ್ರಾರಂಭವಾದ ಈ ಅಧ್ಯಯನದಲ್ಲಿ ಅನೇಕ ಮಹತ್ವದ ಹೊಸ ಹೊಸ ವಿಚಾರಗಳು ಸ್ಪಷ್ಟವಾಗಿವೆ.

ಕರ್ನಾಟಕವು ಪುರಾತನ ಸಂಸ್ಕೃತಿ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದಿದ್ದ, ಪ್ರಾಚೀನ ನಾಡಾಗಿದೆ. ಇಲ್ಲಿರುವ ಅನೇಕ ಪ್ರದೇಶಗಳು ಹಲವಾರು ರಾಜಮನೆತನಗಳ ಆಳ್ವಿಕೆಗೊಳಪಟ್ಟು ಸರ್ವಧರ್ಮಗಳ ಸಮನ್ವಯ ಸಾಧಿಸಿದ ಭೂಮಿಯಾಗಿದೆ. ಇಂತಹ ಹಿನ್ನೆಲೆಯನ್ನು ಪಡೆದ ಒಂದು ಪ್ರದೇಶ ನವಲಗುಂದ ತಾಲ್ಲೂಕು.

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕು ಕೇಂದ್ರ ಸ್ಥಳವಾಗಿದೆ. ಈ ತಾಲ್ಲೂಕಿನಲ್ಲಿ ಶಾಸನಗಳು ಮತ್ತು ದೇವಾಲಯಗಳು, ಸ್ಮಾರಕ ಶಾಸನಗಳು ಇಂದಿಗೂ ಮೂಕ ಸಾಕ್ಷಿಗಳಾಗಿ ಅಂದಿನ ಪರಂಪರೆಯನ್ನು ಪ್ರತಿಬಿಂಬಿಸುತ್ತವೆ.

ನವಲಗುಂದ ತಾಲೂಕಿನ ಇತಿಹಾಸ ಮತ್ತು ವೈಭವ ಸಂಸ್ಕೃತಿಯನ್ನು ತಿಳಿಯುವಲ್ಲಿ ಶಾಸನಗಳು ಮತ್ತು ದೇವಾಲಯಗಳು ಪ್ರಮುಖ ಆಕರಗಳಾಗಿವೆ. ಇವುಗಳು ಕಲೆಗೆ ದೊರೆತ ಪ್ರೋತ್ಸಾಹವನ್ನು ಕಲಾಶೈಲಿಯನ್ನು ಹಾಗೂ ಧಾರ್ಮಿಕ ಸ್ಥಿತಿಯನ್ನು ತಿಳಿಸುವಲ್ಲಿ ಮಹತ್ವದ ಪಾತ್ರವಹಿಸಿವೆ. ಈವರೆಗೆ ನವಲಗುಂದ ತಾಲ್ಲೂಕಿನ ಅಧ್ಯಯನಕ್ಕೆ ಶಾಸನಗಳು ಹಾಗೂ ದೇವಾಲಯಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಅಧ್ಯಯನ ನಡೆದಿಲ್ಲ ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ಮಾಡಿ ಪ್ರಕಟಿತ ಮತ್ತು ಅಪ್ರಕಟಿತ ಮಾಹಿತಗಳೊಂದಿಗೆ ಮಾಡಿದ ಪ್ರಯತ್ನ ಇದಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ ವಿಧಾನಗಳ ಬಗ್ಗೆ ತಿಳಿಸಲಾಗಿದೆ. ಅಧ್ಯಯನ ಮಾಡಲುಬೇಕಾದ ಆಕರಗಳು, ಸಾಹಿತ್ಯಕ ಪುರಾತತ್ವ ಆಕರಗಳ ಬಗ್ಗೆ ಸೆರೆಹಿಡಿಯಲಾಗಿದೆ. ಈ ಆಕರಗಳಿಂದ ಸೆರೆಹಿಡಿದು ಈ ಅಧ್ಯಾಯನದ ಅವಶ್ಯಕತೆಯನ್ನು ಅಧ್ಯಾಯ ಒಂದರಲ್ಲಿ ಹೇಳಲಾಗಿದೆ. ಅಧ್ಯಾಯನದಲ್ಲಿ

ಎರಡರಲ್ಲಿ ನವಲಗುಂದ ತಾಲೂಕಿನ ಐತಿಹಾಸಿಕ ಹಿನ್ನೆಲೆ ರಾಜಕೀಯ ಬಗ್ಗೆ ಹಾಗೂ ಆರಂಭದ ಅರಸು ಮನೆತನದ ಪಾತ್ರದ ಕುರಿತು ಚರ್ಚಿಸಲಾಗಿದೆ. ಈ ಭಾಗದಲ್ಲಿ ಕಲ್ಯಾಣ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಸೇವುಣ, ವಿಜಯನಗರ, ಆಡಳಿತಕ್ಕೆ ಒಳಪಟ್ಟಿತ್ತು. ಅಧ್ಯಾಯ ಮೂರರಲ್ಲಿ ಶಾಸನಗಳ ವೈವಿಧ್ಯತೆ ಕುರಿತು ಚರ್ಚಿಸಲಾಗಿದೆ. ನವಲಗುಂದ ತಾಲೂಕಿನ ಶಾಸನಗಳಲ್ಲಿ ದಾನಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲು, ನಿಷಧಿಗಲ್ಲುಗಳ ವೈವಿಧ್ಯತೆಗಳನ್ನು ಒತ್ತಿ ಹೇಳಲಾಗಿದೆ. ಹೆಚ್ಚಿನ ಮಟ್ಟಿಗೆ ಇಲ್ಲಿ ದೊರೆತ ಶಾಸನಗಳು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದವುಗಳಾಗಿವೆ. ಈ ಸ್ಮಾರಕ ಶಾಸನಗಳು ಅಂದಿನ ಸಾಮಾಜಿಕ, ಧಾರ್ಮಿಕ, ಪರಂಪರೆಯನ್ನು ಬಿಂಬಿಸಿವೆ.

ಅಧ್ಯಾಯ ನಾಲ್ಕರಲ್ಲಿ ನವಲಗುಂದ ತಾಲ್ಲೂಕಿನಲ್ಲಿ ದೇವಾಲಯಗಳ ವಾಸ್ತುಕಲೆ ಬಗ್ಗೆ ತಿಳಿಸಲಾಗಿದೆ. ಇಲ್ಲಿ ಶೈವಪಂಥ, ವೈಷ್ಣವ ಪಂಥ ಮತ್ತು ಜೈನ ಪಂಥಗಳ ಹಾಗೂ ಶಾಕ್ತಪಂಥಗಳು ಆಸ್ತಿತ್ವದಲ್ಲಿದ್ದವು. ಅಧ್ಯಾಯ ಐದರಲ್ಲಿ ಈ ಮೂರ್ತಿಶಿಲ್ಪಗಳನ್ನು ಕುರಿತು ಅಧ್ಯಾಯ ಮಾಡಿದ್ದು ಈ ಮೂರ್ತಿಶಿಲ್ಪಗಳು ಶೈವ, ವೈಷ್ಣವ, ಗಣಪತ್ಯ, ಶಾಕ್ತ, ಜೈನ, ಪಂಥಕ್ಕೆ ಸೇರಿದವುಗಳಾಗಿವೆ. ಈ ಮೂರ್ತಿ ಶಿಲ್ಪಗಳು ಅಂದಿನ ಧಾರ್ಮಿಕ ಪರಂಪರೆಯನ್ನು ಬಿಂಬಿಸಿವೆ. ಹೀಗಾಗಿ ಪ್ರಸ್ತುತ ಕಿರುಪ್ರಬಂಧದಲ್ಲಿ ನವಲಗುಂದ ತಾಲೂಕಿನಲ್ಲಿರುವ ಗ್ರಾಮಗಳನ್ನು ತೆಗೆದು ಅಧ್ಯಯಯನ ಮಾಡಲಾಗಿದೆ. ಈ ತಾಲೂಕಿನ ಸಂಪತ್ತುಗಳಾದ ಶಾಸನಗಳು ಮತ್ತು ದೇವಾಲಯಗಳು ಹಾಗೂ ಸ್ಮಾರಕಗಳು ಇಂದಿಗೂ ಮೂಕ ಸಾಕ್ಷಿಗಳಾಗಿ ನಿಂತಿವೆ.

ಹೀಗೆ ನವಲಗುಂದ ತಾಲೂಕಿನ ಶಾಸನಗಳು, ದೇವಾಲಯಗಳು ಮತ್ತು ಶಿಲ್ಪಗಳು ಪ್ರಾದೇಶಿಕವಾಗಿ ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ  ಕೊಡುಗೆ ಸಲ್ಲಿಸಿವೆ. ಇಷ್ಟೆಲ್ಲ ಮಹತ್ವದ ವಿಷಯಗಳನ್ನು ಹೊರಗೆಡುವ ಈ ಅವಶೇಷಗಳು ಇಂದು ವಿನಾಶದ ಅಂಚಿನಲ್ಲಿವೆ. ಕೆಲವು ನೈಸರ್ಗಿಕ ವಿಕೋಪಗಳಿಗೆ ತುತ್ತಾಗಿ ಕಾಲಗರ್ಭದಲ್ಲಿ ಲೀನವಾಗುತ್ತಿವೆ. ಇನ್ನೂ ಕೆಲವು ಸ್ಥಳೀಯರ ವಿವಿಧ ಮೂಢನಂಬಿಕೆಗಳಿಗೆ ಅಹುತಿಯಾಗುತ್ತಿವೆ. ಈ ಹಿನ್ನೆಲೆಯಲ್ಲಿ ಶ್ರೀಸಾಮಾನ್ಯರ ಇದರ ಅರಿವು ಮೂಡಿಸುವುದರಲ್ಲಿ ಇಲ್ಲಿ ಪ್ರಾಚೀನ ಮಧ್ಯಕಾಲೀನ ಇತಿಹಾಸದ ರಕ್ಷಣೆಯಾದಂತಾಗುತ್ತದೆ.

# ಗ್ರಂಥಋಣ


| ಕನ್ನಡ ಲೇಖಕರು | ಪ್ರಕಟಣೆ | ಕೃತಿ/ಲೇಖನ ಮತ್ತು ಪ್ರಕಾಶಕರು |
| --- | --- | --- |
| ಅನಂತರಂಗಾಚಾರ್ ಎನ್. | ೧೯೫೪ | ''ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ'' ಶ್ರೀ ಎಸ್.ವಿ. ರಂಗಣ್ಣನವರ ಸ್ಮರಣ ಸಂಚಿಕೆ, ಮಹಾರಾಜ ಕಾಲೇಜು, ಮೈಸೂರು |
| ಅಪರ್ಣ ಕೂ.ಸಂ. | ೧೯೯೯ | ದೇವಾಲಯ ವಾಸ್ತು ಶಿಲ್ಪ ಪರಿಚಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಕಲಬುರ್ಗಿ | ೧೯೮೦ | ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. |
| | ೧೯೯೯ | ಪ್ರಾಚೀನ ಕರ್ನಾಟಕದಆಡಳಿತ ವಿಭಾಗಗಳು ಭಾಗ,೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಕಟ್ಟಿ ವೆಂಕಟರಂಗೊ | ೧೯೮೪ | ಧಾರವಾಡ, ಬೆಳಗಾವಿ, ಬಿಜಾಪೂರ, ಕಾನಡಾ ಜಿಲ್ಲೆಗಳ ಗೆಜೆಟಿಯರ್, ಏಶಿಯನ್ ಎಜುಕೇಶನ್ ಸರ್ವಿಸಿಸ್, ನವದೆಹಲಿ. |
| ಕಾಮತ್ ಸೂರ್ಯನಾಥ (ಸಂ.) | ೧೯೮೪ | ಧಾರವಾಡ ಜಿಲ್ಲೆಯ ಗೆಜೆಟಿಯರ್, ಕರ್ನಾಟಕ ಸರ್ಕಾರ, ಬೆಂಗಳೂರು. |
| ಗೋಪಾಲ ಬಿ.ಆರ್. ಸಂ | ೨೦೦೭ | ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| ಗೋಪಾಲರಾವ್ ಎಚ್.ಎಸ್. | ೧೯೯೩ | ಕಲ್ಯಾಣ ಚಾಲುಕ್ಯರ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| ಚಂದ್ರಪೂಜಾರಿ ಎಂ. | ೨೦೦೫ | ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಚಿದಾನಂದ ಮೂರ್ತಿ ಎಂ. | ೧೯೬೬ | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ. |

| | | |
|---|---|---|
| ಜಯಮ್ಮ ಬಿ. | ೨೦೦೬ | ಧಾರವಾಡ ಜಿಲ್ಲೆಯ ಪುರಾತತ್ವ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ತಿಪ್ಪೇರುದ್ರಸ್ವಾಮಿ ಎಚ್. | ೧೯೬೮ | ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು. |
| ಲಕ್ಷ್ಮಣ್ ತೆಲಗಾವಿ | ೨೦೦೪ | ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ನರಸಿಂಹಮೂರ್ತಿ ಎ.ವಿ. | ೨೦೦೩ | ಕರ್ನಾಟಕ ನಾಣ್ಯ ಪರಂಪರೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. |
| ನಾಗಯ್ಯ ಜೆ.ಎಂ. | ೧೯೯೨ | ಆರನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ. |
| ನಾಯಕ ಹಾ.ಮಾ. (ಸಂ) | ೧೯೯೪ | ಕನ್ನಡ ವಿಶ್ವಕೋಶ ಸಂ, ೧೦. ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. |
| ನಿರುಪಮಾ | ೨೦೦೨ | ಸಂಶೋಧನಾ ವಿಧಾನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಪಂಚಮುಖಿ ಆರ್. ಎಸ್. | ೧೯೪೬ | ಕರ್ನಾಟಕದ ಅರಸು ಮನೆತನಗಳು, ಧಾರವಾಡ |
| ಪ್ರಭಾಕರ್ ಎಂ.ಎನ್. | ೧೯೮೯ | ''ದೇವಾಲಯಗಳ ಉಗಮ ಮತ್ತು ಲಾಡಖಾನ್ ದೇವಾಲಯ'', ಇತಿಹಾಸ ದರ್ಶನ ಸಂ. ೪, ಸೂರ್ಯನಾಥ ಕಾಮತ್ (ಸಂ), ಕರ್ನಾಟಕ ಇತಿಹಾಸ ಅಕಾದೆಮಿ (ರಿ)., ಬೆಂಗಳೂರು. |
| ಪರಮಶಿವಮೂರ್ತಿ ಡಿ.ವಿ. | ೧೯೯೯ | ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಪಾವಟೆ ಚನ್ನಕ್ಕ | ೧೯೯೦ | ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| ಮಹಾದೇವ ಸಿ. | ೨೦೦೬ | ಧಾರವಾಡ ಜಿಲ್ಲೆಯ ದೇವಾಲಯ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |

| | | |
|---|---|---|
| ಮಿರ್ಜಿ ಅಣ್ಣಾರಾಯ | ೧೯೯೭ | ಜೈನಧರ್ಮ, ಶಾಂತಿಸೇವಾ ಸದನ, ಶೇಡಬಾಳ. |
| ರಘುನಾಥಭಟ್ ಎಚ್.ಆರ್. | ೧೯೯೯ | ಪ್ರಾಚೀನ ಕರ್ನಾಟಕದ ವಾಸ್ತು ಶಿಲ್ಪಕಲೆ, ಕನಕಸಿರಿ ೧೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂಸ್ಮರಣ ಸಂಚಿಕೆ, ಗೋಪಾಲರಾವ್ ಎಚ್.ಎಸ್. ಸಂ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ರಾಜಶೇಖರ ಎಸ್. | ೧೯೮೮ | ಕರ್ನಾಟಕದ ವಾಸ್ತು ಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್, ಧಾರವಾಡ. |
| ರಾಮಚಂದ್ರರಾವ್ ಎಸ್.ಕೆ. | ೧೯೭೫ | ಮೂರ್ತಿಶಿಲ್ಪ : ನೆಲೆ-ಹಿನ್ನೆಲೆ, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. |
| ರಾಮಕೃಷ್ಣ ಕೆ.ಆರ್. ಕ್ಯಾತನಹಳ್ಳಿ ರಾಮಣ್ಣ | ೨೦೦೩ | ಕ್ಷೇತ್ರಕಾರ್ಯದ ತತ್ವಗಳು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ. |
| ಲಕ್ಷ್ಮೀನಾರಾಯಣರಾಯ ನೆ. ಮತ್ತು ಪಂಚಮುಖಿ ರಾ.ಸ್ವಾ. | ೧೯೪೬ | ಕರ್ನಾಟಕದ ಅರಸು ಮನೆತನಗಳು ಸಂ.೧, ಕರ್ನಾಟಕ ಇತಿಹಾಸ ಸಂಶೋಧಕ ಮಂಡಲ, ಧಾರವಾಡ. |
| ಶಿವತಾರಕ ಕೆ.ಬಿ. | ೨೦೦೧ | ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಶ್ರೀನಿವಾಸ್ ರಿತ್ತಿ (ಸಂ,) | ೨೦೦೦ | ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| ಶೆಟ್ಟಿ ಎಸ್.ಡಿ | ೧೯೯೯ | ಜೈನ ಬಸದಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ಶೇಷಶಾಸ್ತ್ರಿ ಆರ್. | ೨೦೦೪ | ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| ಷಡಕ್ಷರಯ್ಯ ರು.ಮ. ಮತ್ತು ಜಯಮ್ಮ ಬಿ. | ೨೦೦೭ | ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕಗಳು ಮತ್ತು ಶಿಲ್ಪಗಳು, ಧಾರವಾಡ ಉತ್ಸವ ಸಮಿತಿ, ಧಾರವಾಡ ಜಿಲ್ಲಾ ಆಡಳಿತ, ಧಾರವಾಡ. |

| | | |
|---|---|---|
| **ಹಂಚೆ ಅಪ್ಪಣ್ಣ ಎನ್.** | ೨೦೦೭ | “ಜೈನ ಶಿಲ್ಪಕಲೆ : ಪರಿಕಲ್ಪನೆಗಳು”, ರತ್ನಕರಂಡಕ ಡಾ.ಎಚ್.ಎ. ಪಾರ್ಶ್ವನಾಥ ಅಭಿನಂದನ ಗ್ರಂಥ, ಮೈಸೂರು. |
| | ೨೦೦೭ | “ಧಾರವಾಡ ಜಿಲ್ಲೆಯ ಜೈನ ಶಿಲ್ಪಕಲೆ”, ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು. |
| | ೨೦೦೮ | “ಸಾಹಿತ್ಯ ಮತ್ತು ಶಾಸನಗಳಲ್ಲಿ ಭದ್ರಬಾಹು ಭಟ್ಟಾರಕ ಮತ್ತು ಚಂದ್ರಗುಪ್ತ”, ಅರವಂಟಿಗೆ ಸಂ.೧/೧, ಪು. ೧೦-೧೯, ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೋಳ. |
| **ಹಿರೇಮಠ ಬಿ.ಆರ್.** | ೧೯೮೬ | ಕರ್ನಾಟಕದ ಶಾಸನಗಳಲ್ಲಿ ವರ್ತಕರು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| **ಅಮೃತ ಮಹಾದೇವ ಅಣ್ಣಿಗೇರಿ** | ೧೯೬೦ | ಅಣ್ಣಿಗೇರಿ ಶ್ರೀಸ್ವಯಂಭು ಅಮೃತೇಶ್ವರ, ಕ್ಯುರೇಟರ್ ಆಫ್ ದಿ ಮ್ಯೂಜಿಯಂ, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ. |
| **ಡಾ. ಎಫ್.ಟಿ ಹಳ್ಳಿಕೇರಿ** | ೨೦೦೭ | ನಮ್ಮೂರು ನಾವಳ್ಳಿ ಶ್ರೀಕಲ್ಮೇಶ್ವರ ನೂತನ ರಥ ನಿರ್ಮಾಣ ಸಮಿತಿ ನಾವಳ್ಳಿ, ನವಲಗುಂದ, ತಾ. ಧಾರವಾಡ. ಜಿಲ್ಲೆ. |
| **ಜಿ.ಬಿ. ಮನ್ನಾಚಾರ್** | ೨೦೦೧ | ಶ್ರೀನಾಗಲಿಂದ ಪ್ರಭೆ ಸ್ಮರಣ ಅಭಿನಂದನ ಗ್ರಂಥ ಅಭಿನವ ಪರಮಪೂಜ್ಯ ಶ್ರೀ ನಾಗಲಿಂಗ ಮಹಾಸ್ವಾಮಿಗಳವರ ಸುವರ್ಣ ಮಹೋತ್ಸವ ಸಮಿತಿ ಮತ್ತು ಷಷ್ಠ್ಯಬ್ದಿ ಪೂರ್ತಿ ಸಮಾರಂಭ ನವಲಗುಂದ, ಧಾರವಾಡ ಜಿಲ್ಲೆ. |
| **ಡಾ.ಎಂ.ಎ. ಜಯಚಂದ್ರ** | ೨೦೦೬ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂಪುಟ. ೪೮, ಜುಲೈ, ಸೆಪ್ಟೆಂಬರ್, ಸಂಚಿಕೆ ೩, ೨೦೦೬ |
| | ೨೦೦೫ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೮೨, ಜುಲೈ, ಸೆಪ್ಟೆಂಬರ್ ಸಂಚಿಕೆ ೩, ೨೦೦೫ |

| | | |
|---|---|---|
| **ಕನ್ನಡ ವಿಶ್ವಕೋಶ** | ೨೦೦೫ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು. ಮೈಸೂರು ವಿಶ್ವವಿದ್ಯಾಲಯ ಸಂ. ೧೧ |
| **ಶೇಷಶಾಸ್ತ್ರಿ** | ೨೦೦೫ | ಶಾಸನ ಪರಿಚಯ ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ. |
| **ಶ್ರೀಜೆ.ಎಫ್.ಫ್ಲೀಟ್** | ೧೯೭೮ | ಶಾಸನಶಾಸ್ತ್ರ ಪರಿಚಯ ಅನುವಾದ ಶ್ರೀಸಿ.ಪಿ.ಕೆ. ಸುರಚಿ ಪ್ರತಿಭಾಗ್ರಂಥಮಾಲೆ ಧಾರವಾಡ |
| **ಡಾ. ಪಿ.ಕೆ.ರಾಜಶೇಖರ** | ೨೦೦೧ | ಶಿವಸಂಪದ ಶ್ರೀರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ೧೨/೧ ಈವ್ನಿಂಗ್ ಬಜಾರ್ ಹಿಂಭಾಗ ಶಿವರಾಂಪೇಟೆ, ಮೈಸೂರು. |
| **ಎನ್.ಎಸ್.ಮಹಂತೇಶ** | ೨೦೦೮ | ಚಿತ್ರದುರ್ಗ ಕೋಟೆ ಪರಿಸರದ ದೇವಾಲಯಗಳು ರೇಣುಕ ಪ್ರಕಾಶನ, ಚಿತ್ರದುರ್ಗ |
| **ಡಾ.ಎಸ್.ಶ್ರೀಕಂಠಶಾಸ್ತ್ರಿ** | ೨೦೦೬ | ಭಾರತೀಯ ಸಂಸ್ಕೃತಿ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು. |
| **ಡಾ. ಚನ್ನಕ್ಕ ಪಾವಟೆ** | ೨೦೦೩ | ಶಾಸನ ಸಂಜೀವಿನಿ ಚೆನ್ನಗಂಗಾ ಪ್ರಕಾಶನ ಧಾರವಾಡ |
| **ದೇಸಾಯಿ. ಪಿ.ಬಿ.** | ೧೯೮೭ | ಕನ್ನಡ ನಾಡಿನ ಶಾಸನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| **ಪಿ.ಆರ್. ತಿಪ್ಪೇಸ್ವಾಮಿ** | ೧೯೯೪ | ಶಿಲ್ಪಕಲಾ ಪ್ರಪಂಚ ಕರ್ನಾಟಕ ಲಲಿತಕಲಾ ಅಕಾಡೆಮಿ ನೃಪತುಂಗ ರಸ್ತೆ ಬೆಂಗಳೂರು |
| **ಕೆ.ಎಲ್.ಎನ್.ಮೂರ್ತಿ** | ೧೯೯೮ | ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ರಂಜಿತ ಪ್ರಕಾಶನ ನಂ.೪೯, ಸಮೃದ್ಧಿಲೇಜಾಟ್ ತುಮಕೂರು. |
| **ಶಿವರಾಮ ಕಾರಂತ ಕೆ.** | ೧೯೭೫ | ಭಾರತೀಯ ಶಿಲ್ಪ ಬೆಂಗಳೂರು. |
| | ೧೯೭೧ | ಕರ್ನಾಟಕದಲ್ಲಿ ಚಿತ್ರಕಲೆ, ಮೈಸೂರು. |

ದತ್ತಾತ್ರೇಯ ಜಿ. ಕುಲಕರ್ಣಿ — ೨೦೦೬ — ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು ಅಪ್ರಕಟಿತ ಪ್ರಬಂಧ, ಕ.ವಿ.ವಿ. ಹಂಪಿ


## ಆಂಗ್ಲ ಭಾಷೆಯ ಗ್ರಂಥ ಋಣ

Ajith Prasad — 1996 — Jainism in Dharwad Region (Unjpublished Ph.D. Thesis), Dept. of Ancient Indian History and Epigraphy, Karnataka University, Darwad.

Dhaky M.A. — 1997 — Indian Temple Forms in Karnataka (Inscriptions and Architecture), Abhinav Publications, Delhi.

Gopal B.R. — 1981 — The Chalukyas of Kalyana and the Kalchuris, Dharwad.

Hardy Adam — 1995 — Indian Temple Architecture : Form and Transformation, India Gandi National Center for the Art and Abhinav Publication, New Delhi.

Prabhakar M.N. and Shettar Ashok (Ed.) — 2005 — "Hidu Temple: A Systematic Study", Studies in Karnataka History and Bangalore.

Padigar Shrivivas V. — 1996 — Vishnu Cult in Karnataka, Directorate of Archaeology and Museums, Mysore.

Director of Census — 1991 — Census of India, District Census Hand operations Karnarak (Edi.), Book Dharwad District.


## ಶಾಸನ ಸಂಪುಟಗಳು

ಕಲಬುರ್ಗಿ ಎಂ.ಎಂ. ಸಂ. — ೧೯೭೫ — ಧಾರವಾಡ ಜಿಲ್ಲೆಯ ಶಾಸನಸೂಚಿ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

South Indian Inscription, Vol XX.

Annual Reports on South Indian Epigraphy 1938-39, 1944-45, 19945-46

Epigraphia Indica Vol. vI, XII.

Karnataka Inscriptions Vol. V.Kannada Research Institute, Dharwad.

Indian Antiquary Vol. XVIII.

## ಸಂಕೇತ ಸೂಚಿ

| | |
|---|---|
| ಇ.ಕ | - ಎಫಿಗ್ರಫಿಯಾ ಕರ್ನಾಟಕ |
| ಇ. ಆಯ್. | - ಎಫಿಗ್ರಫಿಯಾ ಇಂಡಿಕಾ |
| ಕೆ.ಆಯ್ | - ಕರ್ನಾಟಕ ಇನ್ಸ್ಕ್ರಿಪ್‌ಶನ್ |
| ಎ.ಆರ್.ಎಸ್.ಆಯ್.ಇ. | - ಎನ್ಯುವಲ್ ರಿಪೋರ್ಟ್ಸ್‌ಅನ್ ಸೈಥ್ ಇಂಡಿಯನ್ ಎಪಿಗ್ರಫಿ. |
| ಶಾ.ಸಂ. | - ಶಾಸನ ಸಂಖ್ಯೆ |
| ಕ್ರಿ.ಶ.ಸು | - ಕ್ರಿಸ್ತಶಕ ಸುಮಾರು |
| ಅದೇ | - ಮೇಲಿನ ಉಲ್ಲೇಖ |
| ಪೂರ್ವೋಕ್ತ | - ಈ ಮೊದಲು ಉಲ್ಲೇಖನದ ಕೃತಿ ಲೇಖನ |
| ಸಂ. | - ಸಂಪುಟ. ಸಂಚಿಕೆ |
| ಪು. | - ಪುಟ |
| ಸಂ | - ಸಂಪಾದಕರು. |


ವಿಷ್ಣು ಮೂರ್ತಿ–ಅರೆಕುರಹಟ್ಟಿ


ನವಲೇಶ್ವರ–ಅರೆಕುರಹಟ್ಟಿ


ಪಂಚಮುಖಿ ಆಂಜನೇಯ–ತಲೆಮೊರಬ


ಅಮೃತೇಶ್ವರ ದೇವಾಲಯ–ಅಣ್ಣಿಗೇರಿ


ಪುರದ ಮಠೇಶ್ವರ ಗೋಪುರ–ಅಣ್ಣಿಗೇರಿ


ಪುರದ ಮಠೇಶ್ವರ ಗೋಪುರ–ಅಣ್ಣಿಗೇರಿ



ಪ್ತಮಾತೃಕೆಯರು–ಅರೆಕುರಹಟ್ಟಿ



ಕೋಣನ ತಲೆ–ಅರೆಕುರಹಟ್ಟಿ



ಗಜಲಕ್ಷ್ಮೀ ಶಿಲ್ಪ–ಹಾಲಕುಸಗಲ್



ಗಜಲಕ್ಷ್ಮೀ –ಬೆಳವಟಗಿ



ಗಜಲಕ್ಷ್ಮೀ ಅಮರಗೊಳ



ಜೈನ ಬಸದಿಯ ಭುವನೇಶ್ವರ– ಅಣ್ಣಿಗೇರಿ





ಬನಶಂಕರಿ ದೇಗುಲದ ಗರ್ಭಗೃಹ ಮತ್ತು ಬಾಗಿಲುವಾಡ–ತುಪ್ಪದಕುರಹಟ್ಟಿ



ಕಲ್ಮೇಶ್ವರ ದೇಗುಲದ ಗೋಪರ–ನಾವಳ್ಳಿ ತಿ



ಶಿವಲಿಂಗ ಮೂರ್ತಿ–ಬೆಳವಟಗಿ



ಜೈನ ತೀರ್ಥಂಕರ– ನಾವಳ್ಳಿ



ಜೈನ ಅವಶೇಷ– ತುಪ್ಪದಕುರಹಟ್ಟಿ



ಜೈನ ಬಸದಿಯ ಗೋಪುರ–ಅಣ್ಣಿಗೇರಿ



ಜೈನ ಬಸದಿ ಮೆಟ್ಟಿಲು ಗಜಶಿಲ್ಪ–ಅಣ್ಣಿಗೇರಿ



ಅಮೃತೇಶ್ವರ ದೇಗುಲದ ಜಾಲಂದ್ರ ಬಾಗುಳಿ–ಅಣ್ಣಿಗೇರಿ



ಬನಶಂಕರಿ ದೇಗುಲದ ಸ್ಥಂಭ–ಅಣ್ಣಿಗೇರಿ



ಕಲ್ಯಾಣ ಚಾಲುಕ್ಯರ ಕಾಲದ ಸ್ಥಂಭ–ಮಜ್ಜೀಗುಡ್ಡ



ಸ್ಥಂಭ ಶಾಸನ –ಜಾವುರ



ಗಣಪತಿ ದೇಗುಲದ ಸ್ತಂಭ– ನವಲಗುಂದ



ವೀರಗಲ್ಲು–ಶೆಲವಡಿ



ಪಂಚಮುಖಿ ಆರತಿ ಆಕಾರದ ಶಾಸನ–ತಲೆಮೊರಬ



ಶಿಲಾಶಾಸನ– ಹಾಳಕುಸಗಲ್ಲು



ಶಿಲಾಶಾಸನ–ಶಿರೂರು



ಅಮೃತೇಶ್ವರ ದೇವಸ್ಥಾನದ ಶಿಲಾಶಾಸನ–ಅಣ್ಣಿಗೇರಿ



ಶಿಲಾಶಾಸನ–ಮೊರಬ



ಶಿಲಾಶಾಸನ–ಮೊರಬ



ಶಿಲಾಶಾಸನ– ಹಾಳಕುಸಗಲ್ಲು



ಗೋಸಾಸ–ಕಾಲವಾಡ



ಶಿಲ್ಪಗಳ ಸಾಲು- ಗೋವಿಂದ ದೇವಸ್ಥಾನ- ನವಲಗುಂದ



ಶಿಲಾಶಾಸನ- ನಾವಳ್ಳಿ



ಪುರದ ಮಠೇಶ್ವರ ಗೋಡೆ
ಮೇಲಿನ ಭಿತ್ತಿ ಚಿತ್ರಗಳು –ಅಣ್ಣಿಗೇರಿ





ಚತುರ್ಭುಜ ಬ್ರಹ್ಮ– ಅಣ್ಣಿಗೇರಿ

